—ಬ್ರಹ್ಮೋತ್ತರಖಂಡವನ್ನೊಳಗೊಂಡ ঃঃঃ—

# ಶಿವಲೀಲಾಮೃತ.





ಪ್ರಕಾಶಕರು:—

…ತ, ವೇ. ಕೋಟೆಪ್ಪಯ್ಯ ಶಾಸ್ತ್ರಿಗಳವರು
ಹಿರೇಮಠ ಗದಗ.

ಬೆಲೆ ೨—೪—೦



ಇಸ್ವಿ ೧೯೪೪

::: ಶ್ರೀಗುರು ಪ್ರಸನ್ನ :::

ಬ್ರಹ್ಮೋತ್ತರಖಂಡವನ್ನೊಳಗೊಂಡ,

# ಶಿವಲೀಲಾಮೃತ.

(ಭಾಗ ೧-೨)

.... ಎಂಬೀ ಗ್ರಂಥವು ....

ಗದುಗಿನ - ವೈದ್ಯಭೂಷಣ, ಜ್ಯೋತಿರ್ವಿದ್ವಾನ್, ಪಂಡಿತ,

ವೇ. ತೋಟಪ್ಪಯ್ಯ ಶಾಸ್ತ್ರಿಗಳವರು ಹಿರೇಮಠ,

—— ಇವರಿಂದ ——

ಹೊಸದಾಗಿ ಪರಿಶೋಧಿಸಲ್ಪಟ್ಟು, ಇವರ

ಶ್ರೀ ಮಹಾಂತೇಶ ಮುದ್ರಣ ಮಂದಿರದಲ್ಲಿ ಮುದ್ರಿತವಾಗಿ ಪ್ರಕಟವಾಯಿತು,

::: ಪ್ರಕಾಶಕರು :::






ಬೆಲೆ:— ೨-೪-೦) .... (೧೯೪೪.

# ಮುನ್ನುಡಿ.

**ಪ್ರಿಯ ಮಹಾಶಯರೆ !**

ಶಿವಪುರಾಣದೊಳಗಿನ-ಪ್ರಾಚೀನ ಕಾವ್ಯದೊಳಗಿನ ರಸಯುಕ್ತ ವಿಷಯುಗಳು ತಿಳಿದುಕೊಳ್ಳಲಿಕ್ಕೆ ಬಲು ಗಡಚಾಗಿರುವವಷ್ಟೆ ! ಹಾಗೆಂದೇ ಅವುಗಳೊಳಗಿನ ಕಠಿಣವಾಗಿರುವ-ಪದ್ಯದೊಳಗಿರುವ- ಭಕ್ತಿಪ್ರಧಾನವಾಗಿರುವ ಸಂಗತಿಗಳನ್ನೇ ಆರಿಸಿ ತೆಗೆದು, ತಿಳಿಗನ್ನಡದ ಸುಲಭ ಶೈಲಿಯಲ್ಲಿ ಗದ್ಯ ರೂಪವಾಗಿ ಈ ಗ್ರಂಥವನ್ನು ಬರೆಪದ್ದಾಗಿದೆ. ನಮ್ಮ ಶಿವಭಕ್ತರಿಗೆ ಶಿವನ ಹಾಗು ಶಿವಶರಣ-ಶರಣೆಯರ ಸಚ್ಚರಿತ್ರೆಗಳನ್ನು ಓದುವ ಅಭಿರುಚಿಯು ಮುಂಚಿಗಿಂತ ಹೆಚ್ಚಾಗಿ, **ಶಿವಭಕ್ತಿ**ಯ ಬೆಳಕು ಇನ್ನಿಷ್ಟು ಹಬ್ಬುತ್ತ ಹೋಗಲಿ ! ಎಂಬುದೇ ನಮ್ಮ ಹೆಬ್ಬಾಸೆ !

ಈ ಗ್ರಂಥದ ಮೊದಲನೇ ಭಾಗವೆಂದರೂ ಅಷ್ಟೆ ! **ಬ್ರಹ್ಮೋತ್ತರ ಖಂಡ**ದೊಳಗಿನ ಸರ್ವ ವಿಷಯ ಸಂಗ್ರಹವೆಂದರೂ ಅಷ್ಟೆ !! **ದಾಶಾರ್ಹ ರಾಜನ** ಕಥೆಯನ್ನು ಸುರುವು ಮಾಡಿ, **ಶ್ರೀಯಾಳ ಶ್ರೇಷ್ಠಿ**ಯ ಕಥೆಯನ್ನು ಮುಗಿಸುವದರೊಳಗೆ, ಶಿವರಾತ್ರಿಪೂಜಾ, ಸೋಮವಾರ ವ್ರತ, ಭಸ್ಮ, ರುದ್ರಾಕ್ಷಿ ಮುಂತಾದವುಗಳ ಮಹಿಮೆಯು ನಮಗೆ ಹೊಳೆಯುತ್ತ ನಡೆಯುವದು.

ಇನ್ನು ಎರಡನೇ ಭಾಗದ ಬಗ್ಗೆ ಮಾತೆಂದರೆ :— ಇದನ್ನು ಈ ಪುಸ್ತಕದಲ್ಲಿ ಪ್ರತ್ಯೇಕವಾಗಿ-ಹೊಸದಾಗಿ ಸೇರಿಸಿರುತ್ತೇವೆ. ಇದರ ಮಹತ್ವವನ್ನು ಓದುಗರು ಓದಿಯೇ ಅರಿತುಕೊಳ್ಳಬೇಕು. ಇದರಲ್ಲಿಯೂ ಬಿಜ್ಜ ಮಹಾದೇವಿ, ಬೇಡರ ಕಣ್ಣಪ್ಪ, ಗುರುಭಕ್ತ, ಹೇಮರಡ್ಡಿ ಮಲ್ಲಮ್ಮ, ಅಕ್ಕ ಮಹಾದೇವಿ ಮೊದಲಾದ ಶ್ರೇಷ್ಠ ಶರಣಿ-ಶರಣರ ಪವಿತ್ರ ಕತೆಗಳು ಬಹಳೇ ಹೃದಯಂಗಮವಾಗಿವೆ. ಓದಲಿಕ್ಕೆ ಪ್ರಾರಂಭಮಾಡುವದೊಂದೇ ತಡ ! ಶಿವಭಕ್ತಿಯ ಆವೇಶವು ಹೃದಯದಲ್ಲೆಲ್ಲ ತುಂಬಿಕೊಂಡು 'ಬಿಡುತ್ತದೆ !! ಆಗಾಗ್ಗೆ ಇಂಥ ಪಾವನ ಚರಿತ್ರೆಗಳನ್ನು ಓದುತ್ತಿದ್ದರೆ ಮನವು ಭಕ್ತಿ-ವಿಶ್ವಾಸ ಸುಗ್ಗಿಯೊಳು ಹಿಗ್ಗುತ್ತಿದ್ದು, ವೆಗ್ಗಳವಾದ ಸಗ್ಗಸುಖಕ್ಕೂ ಮಾರ್ಗದರ್ಶಕವಾಗುವದೆಂದು ಈ ಮೂಲಕ ನಿವೇದಿಸುವ,

ಗದಗ
೧-೧-೪೪.

[illegible]ಗಳು.

# ಪರಿವಿಡಿ.



ಈ ಶಿವಭಕ್ತಿ ದ್ಯೋತಕವಾದ

::: ಗ್ರಂಥವು :::

ಗದಗ ಶ್ರೀ ಮಹಾಂತೇಶ ಮುದ್ರಣದಲ್ಲಿ ಮುದ್ರಿಸಿ
ಪ್ರಸಿದ್ಧಿಸಲ್ಪಟ್ಟಿತು.

-+ ॥ಶ್ರೀ ಗಣೇಶ ಪ್ರಸೀದ ॥+-





# ಶಿವಲೀಲಾಮೃತವು.



## ಮಂಗಳಾಚರಣ.

-+: ಭಾಮಿನೀ ಷಟ್ಪದಿ :+-

ವಾಸವಾದಿ ಸುರೇಶನುತಚರ । ಣೇಶದುರಿತ ವಿನಾಶ ಸದ್ಗುಣ ।
ಕೋಶವಿಬುಧ ನಿವಾಸನತಜನತೋಷ ವಿಘ್ನೇಶಾ ॥
ಧೀಶಗಿರಿಜಾಜಾತರವಿಸಂ । ಕಾಶ ಮಂದಸುಹಾಸ, ಗಣಪತಿ ।
ದಾಸನೆನ್ನೀ ಕೃತಿಗೆ ಕಳೆಯನ್ನಿತ್ತು ರಕ್ಷಿಪುದು ॥

[ಮತ್ತೇಭವಿಕ್ರೀಡಿತ ವೃತ್ತ]

ತರಣಿರ್ವಹ್ನಿ ಸುಲೋಚನಂ ಪರತರಂ ನಾಗಾಂಬರಾಭೂಷಿತಂ ।
ಗಿರಿಜಾವಲ್ಲಭ ನಾಗಭೂಷಿತಕರಂ ಚಿದ್ರೂಪಮಾಯಾಗತಂ ॥
ವರದಂ ಮನ್ಮಥದಂತಿ ನಾಶಿತಹರಿಂ ನಿರ್ದೋಷಮೂರ್ತಿಂ ಮುನಿಂ ।
ಭರದಿಂದೆನ್ನನು ಕಾಯಲೀಗಲನಿಶಂ ಖಟ್ವಾಂಗಧಾರಂ ಹರಂ ॥

ಕಂದಂ॥ ಇದರೊಳ್ತಪ್ಪಿರೆ ವಿಬುಧರ್ ।
ಪದಪಿಂ ವರಹಂಸದುಗ್ಧ ತೆರದಿಂ ಕೃತಿಯಂ ।
ವಿಧಿಸುವರೆನ್ನುವ ಮನದಿಂ ।
ಸದಯದಿ ಬುಧಚರಣಯುಗ್ಮ ಭಜಿಪೆಂ ಸತತಂ ॥

## [ ಮೊದಲನೇ ಅಧ್ಯಾಯ ಪ್ರಾರಂಭ ]

# ದಾಶಾರ್ಹ ರಾಜನ ಕಥೆ.

ಪೂರ್ವದಲ್ಲಿ ಭೂಮಂಡಲದೊಳು ಸಮಸ್ತ ಸಂಪತ್ತುಗಳಿಗೂ ತವರುಮನೆಯಾಗಿರುವ ನಾನಾತರದ ವನ-ಉಪವನಗಳಿಂದ ವಿರಾಜಮಾನವಾಗಿರುವ ಸಕಲ ದೇಶಗಳಿಗಿಂತಲೂ ಶ್ರೇಷ್ಠವೆನಿಸಿದ ಮಥುರಾ ಯೆಂಬ ಪಟ್ಟಣದಲ್ಲಿ ಯದುವಂಶದ ದಾಶಾರ್ಹ ನೆಂಬ ಭೂಪನು ಜನಿಸಿದನು. ಅವನು ದಿನ ದಿನಕ್ಕೆ ಶುಕ್ಲಪಕ್ಷದ ಚಂದ್ರನೋಪಾದಿಯಲ್ಲಿ ಬೆಳೆಯುತ್ತ ಮೂವತ್ತೆರಡು ಕಳೆಗಳಿಂದ ಯುಕ್ತನಾಗಿ ಸಕಲಶಾಸ್ತ್ರ ಉಪನಿಷತ್ತುಗಳಲ್ಲಿ ಪಾರಂಗತನಾಗಿ ಷೋಡಶ ವತ್ಸರಗಳಾಗಲು ರಾಜ್ಯಭಾರವನ್ನು ಕೈಕೊಂಡನು, ಇವನು ಸತ್ಯದಲ್ಲಿ ಹರಿಶ್ಚಂದ್ರನಂತೆಯೂ, ಗಾಂಭೀರ್ಯದಲ್ಲಿ ಸಮುದ್ರದಂತೆಯೂ, ಶೌರ್ಯದಲ್ಲಿ ಷಡಾನನನಂತೆಯೂ ತೋರುತ್ತ ಸಮಸ್ತ ವೈರಿಗಳ ಮಂಡಲವನ್ನು ಖಂಡಿಸಿ ಯಾವತ್ತು ಪ್ರಜರನ್ನು ಪುತ್ರರಂತೆ ಪಾಲಿಸುತ್ತಿದ್ದನು. ಇಂಥ ಮಹಾನ್ ಗುಣಗಳಿಂದ ವಿರಾಜಮಾನನಾದ ದಾಶಾರ್ಹನನ್ನು ಎಲ್ಲ ಪ್ರಜರೂ ಇವನೇ ಚಿರಕಾಲವಿರಲೆಂದು ದಿನಾಲೂ ಪರಮೇಶ್ವರನನ್ನು ಪ್ರಾರ್ಥಿಸುತ್ತಿದ್ದರು. ಹೀಗಿರಲು ಒಂದಾನೊಂದು ದಿವಸದಲ್ಲಿ ವಾರಾಣಾಸೀಪುರವನ್ನು ಪಾಲಿಸುವ ಕಾಶೀರಾಜನು ಮಹಾಸುಂದರಿಯೂ,ಕೋಮಲಗಾತ್ರೆಯೂ, ತಪ್ತಸುವರ್ಣದಂತೆ ಕಾಂತಿಯೂ ಉಳ್ಳ ತನ್ನ ಕುಮಾರಿಯಾದ ಕಲಾವತಿಯು ವಿವಾಹಕ್ಕೆ ಪ್ರಾಪ್ತಳಾದದ್ದನ್ನು ಕಂಡು, ಇವಳಿಗೆ ಯೋಗ್ಯಪತಿಯು ಹೇಗೆ ದೊರಕಬಹುದೆಂಬ ಚಿಂತಾಸಾಗರದಲ್ಲಿ ಮುಳುಗಿದ ಕಾಲದಲ್ಲಿ ಮಧುರೇಶನಾದ ದಾಶಾರ್ಹನ ಗುಣಗಳನ್ನು ಕೇಳಿ ತನ್ನ ಸುಪುತ್ರಿಗೆ ಯೋಗ್ಯವರನೆಂದು ತಿಳಿದು ಕಲಾವತಿಯನ್ನು ವಿಧಿಪೂರ್ವಕವಾಗಿ ಧಾರೆಯೆರೆದು ದಾಶಾರ್ಹ ರಾಜನಿಗೆ ಕೊಟ್ಟನು. ಅನಂತರದಲ್ಲಿ ಮಥುರೇಶನು ಕಲಾವತಿಯ ರೂಪಸೌಂದರ್ಯಗಳನ್ನು ದೃಷ್ಟಿಸಿ ಸ್ಮರಶರನ ಬಾಧೆಗೆ ಒಳಗಾಗಿ ಯಾವಾಗ್ಗೆ ಶತಪತ್ರಬಾಂಧವನು ಅಸ್ತಾಚಲವನ್ನೈದುವನೋ, ಯಾವಾಗ್ಗೆ ಈ ಸುಂದರಿಯನ್ನು ಹೊಂದುವೆನೋ ಎಂಬ ಚಿಂತೆಯಿಂದ ಆಪೊತ್ತಿನ ಹಗಲನ್ನು ಒಂದು ಯುಗ ಸಮಾನಮಾಡಿ ಕಳೆದನು. ಕೂಡಲೇ ಭಾಸ್ಕರನು ಇವನ ಅಭೀಷ್ಟವನ್ನು ಪೂರ್ಣ ಮಾಡುವದಕ್ಕೋಸ್ಕರವೇ ಗಮಿಸಿದನೋ ಏನೋ ಎಂಬಂತೆ ಪಶ್ಚಿಮಾಚಲವನ್ನು ಪ್ರವೇಶಮಾಡಲು, ದಾಶಾರ್ಹನು ಪರಮಾನಂದ ಸಾಗರದಲ್ಲಿ ಮುಳುಗಿದನು. ಆವಾಗ್ಗೆ ಅಂತಃಪುರ ದೂತಿಯರು ಕೇಳಿ ಗೃಹವನ್ನು ಶೃಂಗರಿಸಿ ಸುರತಕಾಲದಲ್ಲಿ ಉಪಯೋಗಿಸತಕ್ಕ ಯಾವತ್ತು ಉಪಸಾಹಿತ್ಯವನ್ನು ಸಿದ್ಧಮಾಡುವಷ್ಟರಲ್ಲಿಯೇ ಝಾವರಾತ್ರಿ ಆಗಲು ಕಲಾವತಿಯು ಪಟ್ಟೆ ಪೀತಾಂಬರವನ್ನುಟ್ಟು ಕಳಾಬತ್ತಿನ ಕುಪ್ಪಸವನ್ನು ತೊಟ್ಟು

ವಜ್ರ; ವೈಢೂರ್ಯ, ಗೋಮೇಧಿಕ, ಪುಷ್ಪರಾಗ ಮೊದಲಾದ ನವರತ್ನಗಳ ಆಭರಣಗಳನ್ನು ಧರಿಸಿ ಹಣೆಯಲ್ಲಿ ಕಸ್ತೂರಿ ತಿಲಕವನ್ನು ಹಚ್ಚಿ ಪಾರಿಜಾತ ಪಂಚಕ ಮೊದಲಾದ ಪುಷ್ಪಗಳನ್ನು ಮುಡಿಯಲ್ಲಿ ಮುಡಿದು ಮುಂದಮುಂದಾಗಿ ಹೆಜ್ಜೆಗಳನ್ನಿಡುತ್ತ, ಶಚಿಯೋ, ಶಾಂತಿಯೋ, ಕಾಂತಿಯೋ ಎಂಬಂತೆ ನೋಡು ವವರ ಕಣ್ಣಿಗೆ ಭ್ರಾಂತಿಯನ್ನಿಡುತ್ತಾ, ಆಕಾಶದಿಂದ ನಕ್ಷತ್ರಪುಂಜವೇ ಗೃಹ ವನ್ನು ಪ್ರವೇಶಿಸುವಹಾಗೆ ಕೇಳೀ ಗೃಹವನ್ನು ಪ್ರವೇಶಿಸಿ ಸುವರ್ಣ ಮಂಚದ ಮೇಲೆ ಹಂಸತೂಲಿಕಾತಲ್ಪದಲ್ಲಿ ಪವಡಿಸಿದಳು. ಅದೇ ಕಾಲದಲ್ಲಿ ದಾಶಾರ್ಹ ರಾಜನು ಸರ್ವಾಭರಣಭೂಷಿತನಾಗಿ ಪ್ರತಿಬಿಂಬವನ್ನು ಬಿಂಬವು ಅನುಸರಿಸು ವಂತೆ ಕೂಡಲೇ ಕ್ರೀಡಾಗೃಹವನ್ನು ಸೇರಿ, ಶಯನ ಮಾಡಿರುವ ಕಲಾವತಿ ಯನ್ನು ಕಂಡು ಅವಳ ರೂಪಕ್ಕೆ ಮೋಹಿಸಿ ಏನೂ ವಿಚಾರಿಸದೆ ಇವಳ ಆಲಿಂಗನ ಮಾಡದ ವಿನಾ ತನ್ನ ಪ್ರಾಣವುಳಿಯುವದಿಲ್ಲವೆಂದು ನಿಶ್ಚೈಸಿ ಕಲಾವತಿಯನ್ನು ಅಪ್ಪಿಕೊಳ್ಳಲು ಮಂಚದ ಹತ್ತರ ಹೋದನು. ಆವಾಗ್ಗೆ ಕಲಾವತಿಯು ಅತಿ ತೀವ್ರದಿಂದ ಹಾಸಿಗೆಯಿಂದಿಳಿದು ಬಹು ಲಜ್ಜಾ-ನಮ್ರತೆಯಿಂದ "ಪ್ರಾಣೇಶ್ವ ರನೇ! ನನ್ನನ್ನು ಮುಟ್ಟಬೇಡ" ಎಂದು ಅನೇಕ ವಿಧದಿಂದ ಬಿನ್ನೈಸ ಹತ್ತಿದಳು.

ದಾಶಾರ್ಹನು ಬಿಸಜಬಾಣನ ಬಾಧೆಯಿಂದ ಪೀಡಿತನಾದ ಕಾರಣ ಇವಳ ವಚನಗಳು ಸ್ವಲ್ಪಾದರೂ ಕರ್ಣಪ್ರದೇಶಕ್ಕೆ ಬೀಳಲಿಲ್ಲ, ಕೇವಲ ಬಲಾತ್ಕಾರದಿಂದ ದಾಶಾರ್ಹನು ತನ್ನ ಎರಡೂ ಹಸ್ತಗಳಿಂದ ಕಲಾವತಿಯ ಅಂಗವನ್ನು ಹಿಡಿದು ತನ್ನ ಶರೀರಕ್ಕೆ ಅಂಟಿಸಿಕೊಂಡ ಕೂಡಲೇ ಕಲಾವತಿಯ ದೇಹವು ಕಾದಕಬ್ಬಿಣದಂತೆ ಸುಡಹತ್ತಿತು. ಕೂಡಲೇ ರಾಜನು ಭಯ-ಭೀತಿ ಯಿಂದ ಯುಕ್ತನಾಗಿ ಕಲಾವತಿಯನ್ನು ಬಿಟ್ಟು ಹಿಂದಕ್ಕೆ ಸರಿದು, "ಸುಂದರೀ! ನಿನ್ನ ದೇಹವನ್ನು ನೋಡಿದಕೂಡಲೆ ಬಹು ಮೃದುವಾಗಿಯೂ, ಕೋಮಲ ವಾಗಿಯೂ ತೋರುವದು. ಆದರೆ ಹತ್ತರ ಬಂದು ಆಲಿಂಗನ ಮಾಡುವದರಲ್ಲಿ ನನ್ನ ದೇಹವನ್ನೇ ಸುಡಹತ್ತಿತು. ಇದರ ಕಾರಣವೇನು ?" ಎಂದು ಕೇಳ ಲಾಗಿ, ಸುದತಿಯು, "ಜೀವದೊಡೆಯನೇ! ಸತ್ಯವಾಗಿ ಬಿನ್ನೈಸುವೆನು. ಆದರಿಂದ ಮಾತ್ರ ಕೋಪಗೊಳ್ಳಬೇಡಿರಿ" ಎಂದು ಹೇಳತೊಡಗಿದಳು, ಮೋಹನಾಂಗನೇ! ಮೊದಲು ನಾನು ಬಾಲ್ಯಾವಸ್ಥೆಯಲ್ಲಿದ್ದಾಗ ದುರ್ವಾಸ ಮಹರ್ಷಿಯು ನಮ್ಮ ಮನೆಗೆ ಬಂದು ಕರುಣದಿಂದ ನನಗೆ ಶಿವಪಂಚಾಕ್ಷರೀ ಮಹಾ ಮಂತ್ರ ವನ್ನು ಉಪದೇಶಿಸಿದನು. ಅದರಿಂದ ನಾನು ನಿಷ್ಪಾಪಳಾಗಿರುವೆನು. ಪಾಪ ಯುಕ್ತವಾದ ಪುರುಷರು ನನ್ನನ್ನು ಮುಟ್ಟಲಿಕ್ಕೆ ಶಕ್ತರಾಗುವದಿಲ್ಲ. ನೀವು ರಾಜರಾದ ಪ್ರಯುಕ್ತ ಅನೇಕ ವೇಶ್ಯಾದಿಗಳನ್ನು ಉಪಯೋಗಿಸುವಿರಿ. ಮತ್ತು ಭಕ್ಷಣಕ್ಕೆ ಯೋಗ್ಯವಲ್ಲದ ಪದಾರ್ಥಗಳನ್ನು ಭಕ್ಷಿಸಿರುವಿರಿ. ಇಂಥ ಅನೇಕ ಪಾಪಗಳಿಂದ ಯುಕ್ತವಾದ ನಿಮ್ಮ ದೇಹವು ವ್ರತಸ್ಥಳಾದ ನನ್ನನ್ನು ಸ್ಪರ್ಶ ಮಾಡಲಿಕ್ಕೆ ಯೋಗ್ಯವಾಗದು. ನನಗೆ ಸದ್ಗುರು ಕೃಪೆಯಿಂದ ಭೂತ, ಭವಿಷ್ಯ,

ವರ್ತಮಾನಕಾಲಗಳ ಜ್ಞಾನವಿರುವದು. ನೀವು ಶಿವಾರಾಧನೆ, ಜಪ, ತಪ ಮೊದಲಾದ ಯಾವ ಪುಣ್ಯ ಕರ್ಮಗಳನ್ನು ಮಾಡದೆ ರಾಜ್ಯಮದದಲ್ಲಿರುವದರಿಂದ ನಿಮಗೆ ನರಕ ಪ್ರಾಪ್ತಿಯೇ ಹೊರ್ತು ಮತ್ತೊಂದೇನೇನೂ ದೊರೆಯದು," ಎಂದು ನಾನಾತರವಾದ ನೀತಿಮಾರ್ಗಗಳನ್ನು ಉಪದೇಶಿಸಲು ದಾಶಾರ್ಹರಾಜನು ಮಹಾ ವ್ಯಾಕುಲ ಚಿತ್ತನಾಗಿ, " ಸುಂದರೀ, ಕಲಾವತೀ, ನೀನು ಯಾವಮಂತ್ರ ಪ್ರಭಾವದಿಂದ ನಿಷ್ಪಾಪಳಾಗಿರುವಿಯೋ, ಆ ಮಂತ್ರವನ್ನು ನನಗೂ ಉಪದೇಶ ಮಾಡು," ಎಂದು ಪರಿಪರಿಯಿಂದ ಬೇಡಹತ್ತಿದನು. ಆವಾಗ್ಯೆ ಆ ರಮಣಿಯು " ಪ್ರಾಣೇಶ್ವರನೇ ! ನಿನಗೆ ಉಪದೇಶಿಸಲಿಕ್ಕೆ ನಾನು ಶಕ್ತಳಲ್ಲ. ಕಾರಣ ವಶಿಷ್ಠ ವಿಶ್ವಾಮಿತ್ರರ ಸದೃಶರಾದ ಗರ್ಗಮುನಿಗಳು ಇರುವರು ಅವರ ಹತ್ತರ ನೀನು ಹೋದರೆ ಯಥಾವಿಧಿಯಾಗಿ ಶಿವದೀಕ್ಷೆ ಕೊಡುವರು," ಎಂದು ಹೇಳಲಾಗಿ, ರಾಜನು ಅವಳ ವಚನಗಳನ್ನು ನಂಬಿ ಕಲಾವತಿಯಿಂದ ಸಹಿತವಾಗಿ ಗರ್ಗ ಮುನಿಯ ಆಶ್ರಮಕ್ಕೆ ಬಂದನು. ಅಲ್ಲಿದ್ದ ಶುಕಪಿಕಗಳ ಮಂಜುಲಸ್ವರಗಳನ್ನೂ, ಗಗನಚುಂಬಿತ ವೃಕ್ಷಗಳನ್ನೂ, ವೈರಭಾವವನ್ನು ಬಿಟ್ಟು ಸಂಚರಿಸುವ ಮೃಗಗಳ ಸಮೂಹವನ್ನೂ ಕಂಡು ಸಂತೋಷಭರಿತನಾಗಿ ಮುಂದಕ್ಕೆ ಬಂದು ಸಮಾಧಿ ನಿಷ್ಠಾಗರಿಷ್ಠನಾದ— ಪರಮೇಶ್ವರನ ರೂಪಿಯಾದ— ಗರ್ಗಮಹರ್ಷಿಗೆ ಅಭಿನಮಿಸಿ ಮುಕುಳಿತ ಹಸ್ತನಾಗಿ, " ಪ್ರಭೋ ! ನನಗೆ ಶಿವದೀಕ್ಷೆಯನ್ನು ಕೊಟ್ಟು ಉದ್ಧಾರಮಾಡು," ಎಂದು ಬೇಡಿಕೊಳ್ಳುತ್ತಿರಲು ಕರುಣಾರ್ಣವನಾದ ಗರ್ಗ ಮುನಿಯು ಕಣ್ದೆರೆದು ರಾಜನ ಭಯಭಕ್ತಿಗಳನ್ನು ಕಂಡು ಸಂತಸಂಗೊಂಡು ದಾಶಾರ್ಹನನ್ನು ಮುಂದಕ್ಕೆ ಕರೆದು ಅವನ ಅಭಿಲಾಷೆಯನ್ನು ತಿಳಿದು, ರಾಜನನ್ನು ಯಮುನಾ ನದಿಯ ಹತ್ತರ ಕರೆದುಕೊಂಡು ಹೋದನು. ಅಲ್ಲಿ ರಾಜನು ತನ್ನ ಸ್ತ್ರೀಯಳಿಂದ ಯುಕ್ತನಾಗಿ ವಿಧಿಪೂರ್ವಕ ಮಂಗಲ ಸ್ನಾನಮಾಡಿ ಶುದ್ಧಾಂತಃಕರುಣದಿಂದ ಶ್ರೀ ಪಾರ್ವತೀಶನನ್ನು ಪೂಜಿಸಿದನು. ಮತ್ತು ರಾಜನು ಎಲ್ಲ ಶಿಷ್ಯರಂತೆ ಗುರುಗಳಿಗೆ ಧನವನ್ನು ಕೊಡದೆ ತನು-ಮನ-ಧನಗಳನ್ನು ಗುರುದಕ್ಷಿಣಾರ್ಥವಾಗಿ ಕೊಟ್ಟು-ಗರ್ಗ ಮುನಿಯ ಪಾದಾರವಿಂದಗಳಿಗೆ ಸಾಷ್ಟಾಂಗ ನಮಸ್ಕಾರಮಾಡಿ, ಕೈಜೋಡಿಸಿ ಎದ್ದು ನಿಲ್ಲಲು, ಗರ್ಗಮುನಿಯು ರಾಜನ ಭಕ್ತಿ ಭಾವಗಳಿಗೆ ಮೆಚ್ಚಿ ಪ್ರೇಮದಿಂದ ಅವನ ಶಿರದಲ್ಲಿ ಹಸ್ತವನ್ನಿಟ್ಟು ಶಿವಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿದನು. ಅದರಿಂದ ರಾಜನ ಚಿತ್ತವು ಪವಿತ್ರವಾಗಿ ದಿವ್ಯಜ್ಞಾನ ಉತ್ಪನ್ನವಾಯಿತು. ಮತ್ತು ಅದೇ ಕ್ಷಣದಲ್ಲಿಯೇ ರಾಜನ ಶರೀರದಿಂದ ಕೋಟ್ಯಾವಧಿ ಕಾಗೆಗಳು ಕೆಟ್ಟ ಸ್ವರಮಾಡುತ್ತ ಹೊರಗೆ ಬಂದು ಸಿಡ್ಲುಬಡೆದ ಮರದಂತೆ ಭಸ್ಮವಾಗಿ ಬಿದ್ದವು.

ಈ ಚಮತ್ಕಾರವನ್ನು ದಾಶಾರ್ಹನು ನೋಡಿ ಅತಿ ವಿಸ್ಮಯದಿಂದ ಗರ್ಗ ಮುನಿಯನ್ನು ಕುರಿತು ನನ್ನ ಶರೀರದಿಂದ ಈ ಕಾಗೆಗಳು ಹೊರಬೀಳಲಿಕ್ಕೆ

ಕಾರಣವೇನೆಂದು ವಿಚಾರಿಸಲಾಗಿ ಗರ್ಗಮುನಿಯು, "ಎಲೈ! ರಾಜನೇ, ನೀನು ಅನಂತ ಜನ್ಮಗಳಲ್ಲಿ ಮಾಡಿದ ಬ್ರಹ್ಮಹತ್ಯ, ಗೋಹತ್ಯ, ಶಿಸುಹತ್ಯ ಮೊದಲಾದ ಮಹಾ ಮಹಾ ಪಾಪಗಳು, ಶಿವಪಂಚಾಕ್ಷರೀ ಮಂತ್ರೋಪದೇಶ ಮಾತ್ರದಿಂದಲೇ ಕಾಗೆಯ ರೂಪದಿಂದ ಹೊರಬಿದ್ದು ಭಸ್ಮವಾದವು," ಎಂದು ಹೇಳಿದನು. ನಂತರದಲ್ಲಿ ರಾಜನು ಮಹದಾನಂದದಿಂದ ಯುಕ್ತನಾಗಿ ಗರ್ಗಮುನಿಯನ್ನು ಪುನಃ-ಪುನಃ ಸ್ತೋತ್ರಮಾಡಿ ಅವನ ಆಜ್ಞೆಯಮೇರೆಗೆ ಸ್ತ್ರೀಸಹಿತ ಮಥುರಾ ಪಟ್ಟಣವನ್ನು ಪ್ರವೇಶಿಸಿ ನಿತ್ಯದಲ್ಲಿಯೂ ಎಡಬಿಡದೆ ಶಿವಪಂಚಾಕ್ಷರಿಯನ್ನು ಜಪಮಾಡ ತೊಡಗಿದನು ಮತ್ತು ತನ್ನ ಸಕಲ ಪ್ರಜರಿಗೂ ಶಿವದೀಕ್ಷೆಯನ್ನು ಕೊಡಿಸಿ ಶಿವಮಂತ್ರವನ್ನು ಜಪಮಾಡಲಿಕ್ಕೆ ಆರಂಭಿಸಿದನು. ಮತ್ತು ಶಿವಮಂತ್ರ ಪ್ರಭಾವದಿಂದ ಯಾವ ಭಯವಿಲ್ಲದೆ ಕಲಾವತಿಯಿಂದ ಯುಕ್ತನಾಗಿ, ನಿಷ್ಪಾಪನಾಗಿ ವಾಸಮಾಡಿದನು.

ಮೊದಲನೆಯ ಅಧ್ಯಾಯ ಸಂಪೂರ್ಣವಾದುದು.



# ಎರಡನೇ ಅಧ್ಯಾಯ ಪ್ರಾರಂಭ.

## ಶಿವರಾತ್ರಿ ಕಥೆ.

ಶಿವರಾತ್ರಿಯ ಮಹಿಮೆಯು ಹೇಳಲಸದಳವಾಗಿರುವದು. ಯಾವ ಮನುಷ್ಯನು ಮಹಾ ಶಿವರಾತ್ರಿಯ ದಿವಸ ಉಪೋಷಣಮಾಡಿ ರಾತ್ರಿಯಲ್ಲಿ ಜಾಗರಣೆ ಮಾಡಿ ಅಪ್ರೊತ್ತಿನ ಪ್ರದೋಷ ಕಾಲದಲ್ಲಿ ಬಿಲ್ವ ದಳದಿಂದ ಶಿವಲಿಂಗವನ್ನು ಪೂಜಿಸುವನೋ, ಅವನ ಸಮಸ್ತ ಪಾಪಗಳು ತತ್‌ಕ್ಷಣದಲ್ಲಿಯೇ ನಾಶವಾಗುವವು. ಶಂಕರನಾಮ-ಸ್ಮರಣೆಯು ಯಾವಸ್ಥಳದಲ್ಲಿ ಇರುವದೋ, ಅಲ್ಲಿ ಯಾವ ಭಯವೂ ಆಗಲರಿಯದು. ಪ್ರಾತಃಕಾಲದಲ್ಲಿ ಶಂಕರ ದರ್ಶನ ತೆಗೆದುಕೊಂಡಲ್ಲಿ ರಾತ್ರಿಯಲ್ಲಿ ಮಾಡಿದ ಪಾಪವೂ, ಮಧ್ಯಾಹ್ನದ ದರ್ಶನದಿಂದ ಹಿಂದಿನ ಜನ್ಮದಪಾಪವೂ, ಅಸ್ತಮಯಕಾಲದ ದರ್ಶನದಿಂದ ಏಳು ಜನ್ಮಗಳ ಪಾಪವೂ ವಿಧ್ವಂಸವಾಗುವದೆಂದು ಹೇಳುವದೇನು? ಮುಖ್ಯವಾಗಿ ಶಿವಭಕ್ತರ ಸಮಾನ ಪುಣ್ಯವಂತರು ಜಗತ್ತಿನಲ್ಲಿ ಯಾರೂ ಇಲ್ಲ. ಇದರಲ್ಲಿ ಶಿವರಾತ್ರಿ ದಿವಸ ಉಪೋಷಣ ಮಾಡುವದೂ, ರುದ್ರಾಭಿಷೇಕ ಮಾಡುವದೂ, ರಾತ್ರಿಕಾಲ ಪೂಜೆಮಾಡುವದೂ ಬಹಳ ಪುಣ್ಯಕಾರ್ಯ. ಆದುದರಿಂದಲೇ ವಸಿಷ್ಠ, ವಿಶ್ವಾಮಿತ್ರ ಮೊದಲಾದ ಸಪ್ತಋಷಿಗಳೂ, ವಿದ್ಯಾಧರ, ಗಂಧರ್ವ, ಕಿನ್ನರ ಸಮಸ್ತರೂ ಸಹ ಎಲ್ಲ ವ್ರತಗಳಿಗಿಂತ ಮಾಘ ಕೃಷ್ಣ-ಚತುರ್ದಶಿಯ ವ್ರತವೇ ಉತ್ತಮವಾದುದೆಂದು ತಿಳಿದಿರುವರು.

ಒಂದಾನೊಂದು ಕಾಲದಲ್ಲಿ ವಿಧ್ಯಾಂದ್ರಿ ಪರ್ವತದಲ್ಲಿ ವಾಸವಾಡತಕ್ಕ ಓರ್ವ ಬೇಡರವನು ಕೈಯಲ್ಲಿ ಧನುಷ್ಯ ಬಾಣಗಳನ್ನು ಸ್ವೀಕರಿಸಿಕೊಂಡು ಮೃಗಗಳನ್ನು ವಧಿಸುವದಕ್ಕೋಸ್ಕರ ಘೋರವಾದ ಕಾನನಗಳನ್ನು ಯಮಭಟನಂತೆ ತಿರುಗುತ್ತ ತಿರುಗುತ್ತ ಒಂದು ವನವನ್ನು ಪ್ರವೇಶಿಸಿದನು. ಅಲ್ಲಿಯೇ ಒಂದು ಮನೋಹರ ಶಿವಾಲಯವಿತ್ತು. ಆವೊತ್ತು ಮಹಾಶಿವರಾತ್ರಿಯಿದ್ದ ಪ್ರಯುಕ್ತ ಆ ದೇವಾಲಯಕ್ಕೆ ಮೌಕ್ತಿಕ ಸುಣ್ಣವನ್ನು ಲೇಪಿಸಿ ಪಂಚಪಲ್ಲವಗಳ ತೋರಣಗಳನ್ನು ಕಟ್ಟಿ, ರಂಭಾಸ್ತಂಭಗಳನ್ನು ಅಲ್ಲಲ್ಲಿಗೆ ನಿಲ್ಲಿಸಿದ್ದರು. ಇದರಿಂದ ಆ ದೇವಾಲಯವು ಎರಡನೇ ಕೈಲಾಸವೋ ಏನೋ ಎಂಬಂತೆ ಭಾಸವಾಗುವದು. ಇಂಥ ಸುಂದರವಾದ ಶಂಕರ-ಮಂದಿರದಲ್ಲಿ ಕೆಲವರು ಪರಮೇಶ್ವರನನ್ನು ಪೂಜಿಸುತ್ತಿದ್ದರು; ಕೆಲವರು ಕೀರ್ತನ ವಾಡುತ್ತಿದ್ದರು; ಕೆಲವರು 'ಹರಹರ' ಎಂದು ಅನನ್ಯಭಾವದಿಂದ ಭಜನೆ ಮಾಡುತ್ತಿದ್ದರು. ಈ ಹೊತ್ತಿನಲ್ಲಿ ಬೇಡನು, ಈ ದೇವಾಲಯದಹತ್ತರ ಬಂದು ನೋಡಿ, "ಆಹಾ ! ಈ ಮೂರ್ಖರಾದ ಮಾನವರು ನಿರರ್ಥಕವಾಗಿ ಉಪವಾಸಮಾಡಿ ದೇಹವನ್ನು ಕೃಶಮಾಡಿಕೊಳ್ಳುವರಲ್ಲ ! ಬಾಯಿ ನೊಯ್ಯುವಂತೆ ಏನೇನೋ ಬಾಯಿಯಿಂದ ಬೊಗಳುವರಲ್ಲ !! " ಎಂದು ಇವರ ಚೇಷ್ಟೆ ಮಾಡುವದಕ್ಕೋಸ್ಕರ ತಾನೂ ಶಿವ ಶಿವ ! ಹರ ಹರ !! ಎಂದು ಅನುತ್ತ, ದೇವಾಲಯವನ್ನು ಪ್ರದಕ್ಷಿಣೆ ಮಾಡಿ ಮೃಗಯಾರ್ಥವಾಗಿ ಗಮನಮಾಡಿದನು. ಚೇಷ್ಟೆಗೋಸ್ಕರವಾಗಿ ಮಾಡಿದ ನಾಮಸ್ಮರಣೆಯಿಂದಲೇ ಅವನ ಪಾತಕಗಳು ನಾಶವಾಗಲಿಕ್ಕೆ ಪ್ರಾರಂಭವಾದವು. ಆವೊತ್ತಿನ ಸಾಯಂಕಾಲ ಪರ್ಯಂತವಾಗಿ ಶೋಧಿಸಿದರೂ ವ್ಯಾಧನಿಗೆ ಒಂದಾದರೂ ಮೃಗವು ದೊರಕಲಿಲ್ಲ. ಆದ್ದರಿಂದ ಬೇಡನಿಗೆ ಅನಾಯಾಸವಾಗಿ ಸುದೈವದಿಂದ ಉಪವಾಸ ಫಲವು ಸಂಘಟಿಸಿತು. ನಂತರದಲ್ಲಿ ಬೇಡನು ಹೊಟ್ಟೆಗೆ ಆಹಾರವಿಲ್ಲದೆ ಬಹಳ ತ್ರಾಸನ್ನು ಪಡೆದು ಯಾವಾಗ್ಯೆ ಆಹಾರ ದೊರೆತೀತೋ ಎಂದು ಅತ್ತಿತ್ತ ತಿರುಗುವಷ್ಟರಲ್ಲಿಯೇ ಒಂದು ಸರೋವರವು ಅವನ ಕಣ್ಣಿಗೆ ಕಂಡಿತು. ಆವಾಗ್ಯೆ ವ್ಯಾಧನು ಸ್ವಲ್ಪ ಸಮಾಧಾನಚಿತ್ತನಾಗಿ ಆ ಸರೋವರದ ದಡದಲ್ಲಿದ್ದ ಒಂದು ಬಿಲ್ವವೃಕ್ಷವನ್ನು ಆರೋಹಣ ಮಾಡಿ ಇಲ್ಲಿ ಯಾವದಾದರೂ ಮೃಗವು ಬಂದೀತೆಂದು ತದೇಕಚಿತ್ತನಾಗಿ ನೋಡುತ್ತ ಕುಳಿತನು. ಆವಾಗ್ಯೆ ಆ ವ್ಯಾಧನ ನೇತ್ರಗಳಿಗೆ ಬಿಲ್ವ ದಳಗಳು ಮರೆಯಾಗಹತ್ತಿದವು ಬೇಡನು ಬಹಳ ಸಿಟ್ಟಿನಿಂದ ಆ ದಳಗಳನ್ನು ಹರಿಹರಿದು ನೆಲದಮೇಲೆ ಒಗೆಯಹತ್ತಲು ಆ ದಳಗಳು ಬಿಲ್ವ ವೃಕ್ಷದ ಬುಡದಲ್ಲಿದ್ದ ಶಿವಲಿಂಗದಮೇಲೆ ಬೀಳಲಾರಂಭಿಸಿದವು.

ಈ ಪ್ರಕಾರ ಝಾಮರಾತ್ರಿ ಆಗಲು ಒಂದು ಹರಿಣಿಯು ಜಲಪ್ರಾಶನ ಮಾಡುವದಕ್ಕೆ ಆ ಸರೋವರದಲ್ಲಿ ಪ್ರವೇಶಿಸಿತು. ಜಲವನ್ನು ಪ್ರಾಶನಮಾಡುವಷ್ಟರಲ್ಲಿಯೇ ಗಿಡದಮೇಲಿದ್ದ ಕಾಲರೂಪಿಯಾದ ವ್ಯಾಧನನ್ನು ಕಂಡು, ಸಿಂಹನನ್ನು ಕಂಡ ಗಜದಂತೆ ಭೀತಿಗೊಂಡು ಥರಥರ ನಡಗುವಷ್ಟರಲ್ಲಿಯೇ ಆ ನಿಷ್ಕರುಣಿ

ಯಾದ ವ್ಯಾಧನು ತನ್ನ ಮೇಲೆ ಶರಪ್ರಯೋಗ ಮಾಡಲಿಕ್ಕೆ ಧನುಷ್ಟಂಕಾರ ಮಾಡುವದನ್ನು ಕಂಡು ಘನವಾದ ಭಯದಿಂದ ಭ್ರಾಂತವಾಗಿ ಆ ಬೇಡನನ್ನು ಕುರಿತು, "ಹೇ ದಯಾಸಾಗರಾ! ಕೃಪಾನಿಧೇ!! ನಿರಪರಾಧಿಯಾದ ನನ್ನ ಮೇಲೆ ಏಕೆ ಬಾಣಪ್ರಯೋಗ ಮಾಡುತ್ತೀ? ನಾನು ಸಾಧಾರಣ ಹರಿಣಿಯಲ್ಲ! ಪೂರ್ಣ ಗರ್ಭಿಣಿ ಇರುವೆನು. ನನ್ನ ವಧೆಮಾಡುವದರಿಂದ ನಿನಗೆ ಬಾಲಹತ್ಯಾ ದೋಷವು ಪ್ರಾಪ್ತವಾಗುವದು. ದೇವಾ! ಉದರವು ತುಂಬಿದ ಜೀವಕೋಟಿ ಯನ್ನು ಕೊಂದರೆ ಒಂದು ಟಗರು ನಾಶಮಾಡಿದ ಪಾತಕ ಬರುವದು; ನೂರು ಟಗರುಗಳನ್ನು ಕೊಂದರೆ ಒಂದು ಎತ್ತು ಧ್ವಂಸಮಾಡಿದ ಪಾತಕ ಬರುವದು; ನೂರು ಎತ್ತುಗಳನ್ನು ನಾಶಮಾಡಿದರೆ ಒಂದು ಗೋಹತ್ಯ ಮಾಡಿದ ಪಾತಕ ಬರುವದು; ನೂರು ಗೋಹತ್ಯಮಾಡಿದಲ್ಲಿ ಒಂದು ಬ್ರಹ್ಮಹತ್ಯಾ ದೋಷವೂ, ನೂರು ಬ್ರಹ್ಮಹತ್ಯ ಮಾಡಿದಲ್ಲಿ ಒಂದು ಗುರುಹತ್ಯಾ-ಪಾತಕವೂ, ನೂರು ಗುರು ಹತ್ಯಾ ಮಾಡಿದಲ್ಲಿ ಒಂದು ಗರ್ಭಿಣಿಹತ್ಯಾ ದೋಷವೂ ಪ್ರಾಪ್ತವಾಗುವದು. ಕಾರಣ ಭೋ ದಯಾನಿಧೆ! ನನ್ನನ್ನು ನಿಷ್ಕಾರಣವಾಗಿ ಭೇದಿಸಬೇಡವೆಂದು ಪರಿಪರಿಯಿಂದ ಬೇಡಲಾರಂಭಿಸಿತು. ಆವಾಗ್ಗೆ ವ್ಯಾಧನು "ಎಲೆ ಹರಿಣಿಯೆ! ನಿನ್ನ ವಚನಗಳಿಂದ ಸಂತುಷ್ಟನಾದೆನು ಆದರೆ ಏನು ಮಾಡತಕ್ಕದ್ದು? ಈವೊತ್ತು ನನ್ನ ಹೆಂಡರು ಮಕ್ಕಳು ಮೊದಲಾದ ಯಾವತ್ತೂ ಮಂಡಳಿಯು ಉಪವಾಸವಿರುವದು. ಇದಂತೂ ಇರಲಿ, ನೀನು ಇಷ್ಟು ಮಂಜುಲಸ್ವರದಿಂದ ನೀತಿ ವಚನಗಳನ್ನು ಹೇಳಬೇಕಾದರೆ ನೀನು ಯಾರು ಇರುವಿ? ನಿನ್ನ ವೃತ್ತಾಂತ ವನ್ನು ನಿವೇದಿಸೆಂದು ಕೇಳಲಾಗಿ ಆ ಹರಿಣಿಯು ಇಂತೆಂದಿತು, "ವ್ಯಾಧನೇ! ಪೂರ್ವದಲ್ಲಿ ನಾನು ರಂಭೆಯೆಂಬ ಅಪ್ಸರೆಯು ನನ್ನ ಸೌಂದರ್ಯಕ್ಕೆ ಮರು ಳಾಗಿ ಸಕಲ ದೇವತೆಗಳು ಚಿತ್ರ-ಪ್ರತಿಮಾ ರೂಪಗಳನ್ನು ಹೊಂದುತ್ತಿದ್ದರು ಒಂದಾನೊಂದು ದಿವಸದಲ್ಲಿ ನನ್ನ ನೃತ್ಯ-ಗಾನಗಳಿಗೆ ಹಿರಣ್ಯನೆಂಬ ರಕ್ಕಸನು ಮೋಹಿಸಿ ನನ್ನನ್ನು ಕರೆದುಕೊಂಡು ಹೋಗಲು ನಾವೀರ್ವರು ಬಹು ಸಂಭ್ರಮ ದಿಂದ ವಾಸಮಾಡಿದೆವು. ಆ ಕಾಲದಲ್ಲಿ ಶ್ರೀ ಶಂಕರ ಧ್ಯಾನವನ್ನು ಸ್ವಪ್ನದಲ್ಲಿ ಕೂಡ ನಾನು ಮಾಡಲಿಲ್ಲ. ಒಂದು ದಿವಸ ದೈತ್ಯನು ಮೃಗಯಾರ್ಥ ವಾಗಿ ಗಮನಮಾಡಿದಕಾಲದಲ್ಲಿ ನಾನು ಶಂಕರನ ದರ್ಶನಾರ್ಥವಾಗಿ ಕೈಲಾ ಸಕ್ಕೆ ಬಂದೆನು. ಶಂಕರನು ನನ್ನನ್ನು ನೋಡಿ, ನೀನು ಲೋಕದಲ್ಲಿ ಮೃಗಿ ಯಾಗಿ ಹುಟ್ಟು, ಮತ್ತು ನಿನ್ನಲ್ಲಿ ರತನಾದ ಹಿರಣ್ಯನು ಮೃಗವಾಗಲಿ ಎಂದು ಶಾಪವನ್ನು ಕೊಡುತ್ತಲೆ ನನಗೆ ಬಹಳ ದುಃಖವಾಗಿ ಪರಮೇಶ್ವರನನ್ನು ಪ್ರಾರ್ಥಿ ಸಲು ಪಾರ್ವತೀ ಪತಿಯು ಹನ್ನೆರಡು ವರುಷ ಪರಿಯಂತ ಹರಿಣಿಯಾಗು ನಂತರದಲ್ಲಿ ನನ್ನ ಸ್ಥಾನವನ್ನೇ ಕುರಿತು ಬಾಯೆಂದು ಮರಳಿ ಶಾಪ ನೀಡಲು, ನಾವೀರ್ವರು ಈ ಅರಣ್ಯದಲ್ಲಿ ಮೃಗಗಳಾಗಿ ಹುಟ್ಟಿದೆವು

ಸದಾ ನಿನಗೆ ಬೇಡಿಕೊಳ್ಳುವದೇನಂದರೆ- ನನಗೆ ಪ್ರಸೂತ ಕಾಲವು ಸಮೀಪ ವಾಗಿರುವದು. ಕಾರಣ ಮನೆಗೆ ಹೋಗಿ ಪ್ರಸೂತಳಾಗಿ ಪುನಃ ನಿನ್ನ ಹತ್ತರ ಬರುವೆನು ಆ ಮೇಲೆ ನನ್ನ ವಧೆಮಾಡು. ಅದಕ್ಕೆ ನಾನು ಸಿದ್ಧಳಿರುವೆನು, ನನ್ನ ವಚನಮಾತ್ರ ಮಿಥ್ಯವೆಂದು ಗ್ರಹಿಸಬೇಡ, ಇಷ್ಟು ಕಾರ್ಯಕ್ಕೆ ನನಗೆ ಅಪ್ಪಣೆ ನೀಡಬೇಕು ಎಂದು ಪ್ರಾರ್ಥಿಸಲು, ವ್ಯಾಧನಿಗೆ ಆ ಹರಣಿಯ ಮಾತು ನಿಶ್ಚಯ ವಾಗಿ ತೋರದ್ದರಿಂದ ನನಗೆ ನಿನ್ನ ಮಾತಿನಮೇಲೆ ನಂಬಿಗೆ ಯಾಗುವದಿಲ್ಲ ಶಪಥಪೂರ್ವಕ ಹೇಳೆನಲಾಗಿ ಹರಣಿಯು 'ನಾನಾ ಪ್ರಕಾರ ಶಪಥಗಳನ್ನು ಮಾಡಿ ಅವನಿಗೆ ವಿಶ್ವಾಸಹುಟ್ಟಿಸಿ, ಅವನಿಂದ ಆಜ್ಞೆಯನ್ನು ಪಡೆದು ಜಲಪ್ರಾಶನಮಾಡಿ ಮರಳಿ ತನ್ನ ಗೃಹಕ್ಕೆ ಬಂದಿತು. ಅತ್ತಲಾ ವ್ಯಾಧನು ಪುನಃ ವೃಕ್ಷವನ್ನೇರಿ ಮತ್ತಾವ ಮೃಗಗಳು ಬರುತ್ತವೆಯೋ ಎಂದು ನೋಡುತ್ತ ದೃಷ್ಟಿಗೆ ಬಂಧವಾಗತಕ್ಕ ಬಿಲ್ವದಳಗಳನ್ನು ಹರಿದುಹಾಕುತ್ತ ಕುಳಿತನು ಇಷ್ಟರಲ್ಲಿ ಎರಡು ಝಾವರಾತ್ರಿಯಾಯಿತು ಆ ಮೇಲೆ ಮತ್ತೊಂದು ಹರಿಣಿಯು ನೀರು ಕುಡಿಯುವದಕ್ಕೆ ಆ ಸರೋವರಕ್ಕೆ ಬಂದು ಗಿಡದ ಮೇಲೆ ಶರಸಂಧಾನ ಮಾಡಿ ಕುಳಿತಿರುವ ದುರುಳ ವ್ಯಾಧನನ್ನು ಕಂಡು ದೀನವಾಣಿ ಯಿಂದ '' ಎಲೈ ಮಹಾ ಪುರುಷನೇ ! ಸಧ್ಯಕ್ಕೆ ನಾನು ಕಾಮಾತುರಳಾದ ಪ್ರಯು ಕ್ತ ನನ್ನ ಪತಿಗೆ ಸುರತಸುಖವನ್ನು ಕೊಟ್ಟು ನಿನ್ನ ಹತ್ತರಬರುವೆನು. ಆವಾಗ್ಗೆ ನನ್ನನ್ನು ವಧಿಸು " ಎಂದು ಬೇಡಿಕೊಳ್ಳಲಾಗಿ ಶಬರನು ನಿನ್ನ ಮಾತಿನಮೇಲೆ ನನಗೆ ವಿಶ್ವಾಸವಾಗದು ಕಾರಣ ಶಪಥಪೂರ್ವಕ ಹೇಳೆಲನಲಾಗಿ ಹರಣಿಯು ನಾನು ನಿನಗೆ ಕೊಟ್ಟ ವಚನದ ಮೇರೆಗೆ ಬರದಿದ್ದರೆ ಸಮಸ್ತ ಪಾಪಗಳಿಗೂ ಭಾಗಿ ಯಾಗುವೆನೆನಲಾಗಿ ವ್ಯಾಧನು ಅಪ್ಪಣೆಯನ್ನಿತ್ತನು. ಬಳಿಕ ಹರಣಿಯು ಜಲ ಕುಡಿದು ಗಮಿಸಿತು. ಇಷ್ಟರಲ್ಲಿ ಮೂರು ಝಾವ ರಾತ್ರಿಯಾಯಿತು. ನಂತರ ದಲ್ಲಿ ಈ ಹರಿಣಿಗೆ ವಲ್ಲಭನಾದ ಹರಿಣವು ಉದಕಪ್ರಾಶನಕ್ಕೆ ಅದೇ ಸರಸ್ಸಿಗೆ ಬಂದು, ಗಿಡದಮೇಲೆ ತನ್ನನ್ನು ವಧಿಸಲಿಕ್ಕೆ ಸಿದ್ಧನಾಗಿ ಕುಳಿತಿರುವ ಶಬರ ನನ್ನು ಕಂಡು ಹರಿಣವು " ಎಲೈ ವ್ಯಾಧನೆ ! ನಾನು ಗೃಹಕ್ಕೆಹೋಗಿ ನನ್ನ ಮಡದಿಯರಿಗೆ ಯಾವತ್ತೂ ವಿಚಾರಗಳನ್ನು ತಿಳುಹಿಸಿ ಪುನಃ ನಿನ್ನೆಡೆಗೆ ಬರು ವೆನು. ಆವಾಗ್ಯೆ ನನ್ನನ್ನು ವಧಿಸು " ಎನಲಾಗಿ, ವ್ಯಾಧನು ನಿನ್ನ ಮಾತಿನ ಮೇಲೆ ನಂಬಿಗೆ ಹುಟ್ಟದೆನಲಾಗಿ ಹರಿಣವು ಅನೇಕ ಶಪಥಗಳನ್ನುಮಾಡಿ ಅವನಿಂದ ಅಪ್ಪಣೆ ಪಡೆದು ಜಲಕುಡಿದು ತನ್ನ ಬಿಡಾರಕ್ಕೆ ತೆರಳಿತು.

ಆ ಮೇಲೆ ವ್ಯಾಧನಿಗೆ ಗಿಡದ ಮೇಲೆಯೇ ಅಕಸ್ಮಾತ್ತಾಗಿ ಬಾಯಿಂದ ಶಿವನಾಮಸ್ಮರಣೆ ನಡೆದಿತ್ತು. ಅಲ್ಲದೆ ಪ್ರತಿ ಪ್ರತಿ ಝಾವಗಳಲ್ಲಿಯೂ ಬಿಲ್ವ ಪತ್ರಗಳನ್ನು ಹರಿದು ಒಗೆಯುವದರಿಂದ ಅನಾಯಾಸವೇ ಶಿವಲಿಂಗಾರ್ಚನೆಯು ಸಂಘಟಿಸಿತು. ಅಷ್ಟರಲ್ಲಿ ಮೂರನೇ ಹರಿಣಿಯು ಜಲಪ್ರಾಶನಕ್ಕೆ ಅದೇ ಸರೋವರಕ್ಕೆ ಬಂದು ತನ್ನನ್ನು ವಧಿಸಲಿಕ್ಕೆ ಯತ್ನಿಸುತ್ತಿರುವ ವ್ಯಾಧನನ್ನು ಕಂಡು,

ಆವುಗಳಿಗೆ ಸ್ವಲ್ಪ ಹಾಲು ಕುಡಿಸಿ ನಿನ್ನಹತ್ತರ ಬರುವೆನು. ನಂತರದಲ್ಲಿ ನನ್ನನ್ನು ಕೊಲ್ಲು " ಎನ್ನಲಾಗಿ, ಬೇಡನು ನಿನ್ನ ವಚನದಲ್ಲಿ ವಿಶ್ವಾಸವಿಲ್ಲವೆಂದು ಹೇಳಲಾಗಿ ಹರಣಿಯು ಅನೇಕ ಪಣಗಳನ್ನು ಮಾಡಿ, ಅವನ ಆಜ್ಞೆಯಮೇರೆಗೆ ಉದಕವನ್ನು ಕುಡಿದು ತನ್ನ ಗೃಹಕ್ಕೆ ಬಂದಿತು. ಅಲ್ಲಿ ಮೊದಲನೇ ಹರಣಿಯು ಪ್ರಸೂತವಾಯಿತು. ಎರಡನೇ ಹರಣಿಯು ತನ್ನ ಕಾಮನವನ್ನು ನೆರವೇರಿಸಿತು. ಮೂರನೇ ಹರಣಿಯು ತನ್ನ ಸಣ್ಣ ಸಣ್ಣ ಶಿಶುಗಳಿಗೆ ಸ್ತನ್ಯಪಾನ ಮಾಡಿಸಿತು. ತರುವಾಯ ಆ ನಾಲ್ಕೂ ಮೃಗಗಳು ವ್ಯಾಧನಿಗೆ ಕೊಟ್ಟ ವಚನವನ್ನು ತಪ್ಪಬಾರದೆಂದು ತಿಳಿದು ತಮ್ಮ ಸಣ್ಣ ಶಿಶುಗಳಿಂದ ಸಹಿತವಾಗಿ ಶಬರನ ಹತ್ತರ ಬಂದವು. ಅದರಲ್ಲಿದ್ದ ಹರಿಣವು ಮುಂದಕ್ಕೆ ಬಂದು, " ಎಲೈ ವ್ಯಾಧನೇ ! ಮೊದಲಿಗೆ ನನ್ನನ್ನು ವಧಿಸು " ಎಂದು ಹೇಳತೊಡಗಿತು. ಕೂಡಲೆ ಮೂರೂ ಹರಿಣಗಳು ಮುಂದಕ್ಕೆ ಬಂದು, ಎಲೈ ಪುಣ್ಯಾತ್ಮನೇ ! ಮೊದಲು ನಮ್ಮನ್ನು ಸಂಹರಿಸಿ ಆಮೇಲೆ ಪತಿಯನ್ನು ವಧಿಸಬೇಕು ಎಂದು ಬಿನ್ನೈಸಲಾರಂಭಿಸಿದವು. ಅಷ್ಟರಲ್ಲಿ ಆ ಸಣ್ಣಮೃಗ-ಶಿಶುಗಳು ಓಡುತ್ತಾ ಮುಂದಕ್ಕೆಬಂದು, " ಶಬರನೇ ! ಮೊದಲು ನನ್ನನ್ನು ಸಂಹರಿಸಿ, ಬಳಿಕ ತಂದೆ-ತಾಯಿಗಳನ್ನು ಹಿಂಸಿಸಬಹುದು, " ಎಂದು ವಿನಯದಿಂದ ಪ್ರಾರ್ಥಿಸಹತ್ತಿದವು. ಈ ಪ್ರಕಾರವಾಗಿ ತಮ್ಮ ತಮ್ಮೊಳಗೆ ಪ್ರಾಣಗಳಮೇಲೆ ಸ್ವಲ್ಪಾದರೂ ಲಕ್ಷ್ಯವನ್ನಿಡದೆ " ನಮ್ಮನ್ನು ಮೊದಲು ಕೊಲ್ಲು ! ನಮ್ಮನ್ನು ಮೊದಲು ಕೊಲ್ಲು !! " ಎನ್ನುವ ಹರಿಣಗಳನ್ನು ನೋಡಿ ವ್ಯಾಧನಿಗೆ ಮಹದಾಶ್ಚರ್ಯವಾಯಿತು, ಗದ್ಗದಿತಕಂಠನಾಗಿ ಆ ಮೃಗಗಳ ಪಾದಗಳಮೇಲೆ ಬಿದ್ದು, " ಎಲೈ ಬ್ರಹ್ಮಜ್ಞಾನ ಸಂಪನ್ನ ಮೃಗಗಳೇ ! ನಿಮ್ಮನ್ನು ನೋಡಿದ ಮಾತ್ರದಿಂದ ನನ್ನ ಸಮಸ್ತ ಪಾತಕಗಳು ನಷ್ಟವಾದವು. ನನಗೆ ಕ್ಷಣಭಂಗುರವಾದ ಸಂಸಾರದಲ್ಲಿ ಕೊಂಚವೂ ಇಚ್ಛೆಯಿರದೆ ಯಾವಾಗಲೂ ಪರಮೇಶ್ವರನ ಪಾದಾರವಿಂದವನ್ನು ಭಜಿಸುವಬಯಕೆಯು ಯಾವನಿಗಿರುವದು? ಈವೊತ್ತಿಗೆ ನಾನು ಧನ್ಯನಾದನು. " ಎಂದು ಮಾತಾಡುವ ಸ್ವರಲ್ಲಿಯೇ ಆಕಾಶಮಾರ್ಗದಿಂದ ಕೋಟಿ ಸೂರ್ಯಪ್ರಕಾಶಮಾನವಾದ ವಿಮಾನದಲ್ಲಿ ಭಸ್ಮೋದ್ಧೂಳಿತ ವಿಗ್ರಹರೂ, ರುದ್ರಾಕ್ಷಮಾಲಾಶೋಭಿತರೂ, ಶೂಲಪಾಣಿಗಳೂ, ಆದಿಶಿವಧೂತರೂ ಕುಳಿತು ಶಿವನಾಮವನ್ನು ಗರ್ಜಿಸುತ್ತಾ, ವ್ಯಾಧನ ಸಮೀಪಕ್ಕೆ ಬಂದರು. ನಂತರದಲ್ಲಿ ಸರ್ವ ಮೃಗಗಳೂ ತಮ್ಮ ಶರೀರವನ್ನು ಬಿಟ್ಟು ದಿವ್ಯ ದೇಹವನ್ನು ಧರಿಸಿದವು. ಆಮೇಲೆ ಶಿವಧೂತರು ಸಕಲ ಮೃಗಗಳನ್ನೂ, ವ್ಯಾಧನನ್ನೂ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ತೆರಳಿದರು.

ಎರಡನೇ ಅಧ್ಯಾಯ ಸಂಪೂರ್ಣವಾದುದು.



# ಮೂರನೇ ಅಧ್ಯಾಯ ಪ್ರಾರಂಭ.

## ಮಿತ್ರಸಹರಾಜನ ಕಥೆ.



ಸಕಲ ಸಂಪತ್ಸಮೃದ್ಧಿಯಾದ ಅಯೋಧ್ಯಾಪಟ್ಟಣದಲ್ಲಿ ಇಕ್ಷ್ವಾಕುವಂಶದ ಮಿತ್ರಸಹನೆಂಬ ರಾಜನು ಧರಣಿಯನ್ನು ಪೊರೆಯುತ್ತಿದ್ದನು. ಇವನು ಜ್ಞಾನದಲ್ಲಿ ಬೃಹಸ್ಪತಿಯಂತೆಯೂ, ರೂಪದಲ್ಲಿ ಮನ್ಮಥನಂತೆಯೂ, ಗಾಂಭೀರ್ಯದಲ್ಲಿ ಜಲಂಧರನಂತೆಯೂ ಇದ್ದು ಸಕಲ ಕಲಾಕೋವಿದನಾಗಿ ಸರ್ವ ಶಸ್ತ್ರಾಸ್ತ್ರಗಳಲ್ಲಿ ಪ್ರವೀಣನಾಗಿದ್ದನು. ಒಂದಾನೊಂದು ದಿವಸ ಈ ರಾಜನು ಬೇಟೆಯಾಡುವ ನಿಮಿತ್ತ ಘೋರವಾದ ಅರಣ್ಯವನ್ನು ಪ್ರವೇಶಿಸಿ ಅಲ್ಲಿದ್ದ ಸಿಂಹಗಳನ್ನೂ, ಶಾರ್ದೂಲಗಳನ್ನೂ, ವರಾಹಗಳನ್ನೂ, ಕಾಡಕೋಣ ಮೊದಲಾದವುಗಳನ್ನೂ ತೀಕ್ಷ್ಣ ಬಾಣದಿಂದ ಸಂಹರಿಸಿ ಸಂಚರಿಸುವ ವೇಳೆಯಲ್ಲಿ ಓರ್ವ ರಾಕ್ಷಸನು ಮಿತ್ರಸಹರಾಜನನ್ನು ಕಂಡು, “ ಓಹೋ !! ಇವನೇ ಅಲ್ಲವೇ ? ನನ್ನ ಅಣ್ಣನನ್ನು ಕೊಂದಂಥವನು ! ಆಹಾ !! ಈ ಹಗೆತನವನ್ನು ಹೇಗೆ ಸಾಧಿಸಲಿ? ಇವನನ್ನು ಕೊಲ್ಲುವದು ಸಕಲ ಸುರಾಸುರರಿಗೆ ಅಸಾಧ್ಯವಾಗಿರುವದಲ್ಲ !!! ” ಎಂದು ಚಿಂತಿಸಿ, ಒಂದು ಆಲೋಚನೆಯನ್ನು ಮಾಡಿ ಮನುಷ್ಯರೂಪವನ್ನು ಧರಿಸಿ, ಭೂಪತಿಯ ಹತ್ತಿರಬಂದು, “ ಎಲೈ ರಾಜನೇ ! ನಾನು ಸೂಪಶಾಸ್ತ್ರದಲ್ಲಿ ಪ್ರವೀಣನಿರುವೆನು ಇಚ್ಛಿತ ಪಕ್ವಾನ್ನಗಳನ್ನು ಮಾಡಬಲ್ಲೆನು. ನನ್ನನ್ನು ನಿನ್ನ ಗೃಹದಲ್ಲಿ ಇಟ್ಟುಕೊಳ್ಳಬಾರದೆ ? ”ಎಂದು ಬೆಸಗೊಳ್ಳಲಾಗಿ, ರಾಜನು ಈ ದುಷ್ಟನ ಕಪಟತ್ವವನ್ನು ತಿಳಿಯದೆ ರಕ್ಕಸನ ವಚನಗಳನ್ನು ನಂಬಿ, ತನ್ನ ಮನೆಗೆ ಕರೆದೊಯ್ದನು

ತರುವಾಯ ಕೆಲವು ದಿನ ಹೋಗಲಾಗಿ ರಾಜನ ಪಿತೃ ತಿಥಿಯು ಬಂದಿತು. ಇದೇ ಸಂಧಿಯಲ್ಲಿ ರಕ್ಕಸನು ಪಾಕದಲ್ಲಿ ನರಮಾಂಸವನ್ನು ಕೂಡಿಸಿ ಅಡಿಗೆಮಾಡಿದ್ದನು. ಆವಾಗ ಮಿತ್ರಸಹರಾಜನು ಕುಲಗುರುಗಳಾದ ವಸಿಷ್ಠರನ್ನು ಕರೆತಂದು ಕೂಡಿಸಲು ರಕ್ಕಸನು ನರಮಾಂಸ ಮಿಶ್ರಿತ ಪಾಕವನ್ನು ವಸಿಷ್ಠನ ಎಡೆಯಲ್ಲಿ ಬಡಿಸಿದನು. ಜ್ಞಾನಸಿದ್ಧನಾದ ವಸಿಷ್ಠನು, ತನ್ನ ಪಾತ್ರೆಯಲ್ಲಿದ್ದ ನರಮಾಂಸ ಮಿಶ್ರಿತ ಪಾಕವನ್ನು ನೋಡಿ ಕೋಪೋದ್ರೇಕಗೊಂಡವನಾಗಿ ರಕ್ಕಸನ ಮೋಸವನ್ನು ತಿಳಿಯದೆ, “ ಎಲೈ ರಾಜನೇ ! ಪ್ರತ್ಯಕ್ಷ ಬ್ರಾಹ್ಮಣನಾದ ನನಗೆ ನರಮಾಂಸವನ್ನು ನೀಡಿದಮೇಲೆ ನೀನು ಬ್ರಹ್ಮರಾಕ್ಷಸನಾಗು, ” ಎಂದು ಶಪಿಸಿದನು. ಕೂಡಲೇ ಸೂಪಕಾರನ ವೇಷವನ್ನು ಧಾರಣ ಮಾಡಿದ ಬ್ರಹ್ಮರಾಕ್ಷ

ಸನೂ ಅತ್ಯಾನಂದವನ್ನು ಪಡೆದು ಓಡಿಹೋದನು. ಮಿತ್ರಸಹರಾಜನು ಈ ಕಾಪ ಟ್ಯವನ್ನು ತಿಳಿಯದೆ ಇದ್ದದರಿಂದ ನಿರರ್ಥಕವಾಗಿ ಗುರುಗಳು ತನಗೆ ಶಾಪ ಕೊಟ್ಟರೆಂದು ಮಹಾ ಕ್ರೋಧದಿಂದ ಕೈಯಲ್ಲಿ ಉದಕವನ್ನು ತೆಗೆದುಕೊಂಡು, "ಆಚಾರ್ಯನೇ! ನಿರಪರಾಧಿಯಾದ ನನಗೆ ನೀನು ಶಾಪಕೊಟ್ಟದ್ದರಿಂದ ನಿನಗೂ ನಾನು ಶಾಪಕೊಡುತ್ತೇನೆ" ಎಂದು ಸಿದ್ಧನಾಗಲು, ರಾಜನ ಹೆಂಡ ತಿಯಾದ ಮದಯಂತಿಯು ಧಾವಿಸುತ್ತ ಬಂದು ಪತಿಯಕರಹಿಡಿದು, "ಪ್ರಿಯನೇ! ಇಂಥ ಅನ್ಯಾಯ ಕಾರ್ಯವನ್ನು ಮಾಡಬಹುದೇ? ಗುರುಗಳು ಏನುಮಾಡಿ ದರೂ ಅದನ್ನು ಶಿರಸಾವಹಿಸಬೇಕಲ್ಲದೆ ಅವರಮೇಲೆ ತಿರುಗಿ ಮಾತಾ ಡಬಹುದೇ? ಗುರುಗಳು ಕುಲದೇವತೆಯೆಂಬುದನ್ನು ನೀವು ಅರಿಯಲಾ ರಿರಾ?" ಎಂದು ನಾನಾತರದ ನೀತಿ ವಚನಗಳನ್ನು ಹೇಳಲಾಗಿ ಮಿತ್ರ ಸಹರಾಜನು ಅವಳ ಮಾತಿಗೆ ಒಡಂಬಟ್ಟು ತನ್ನ ಹಸ್ತದಲ್ಲಿದ್ದ ಉದಕವನ್ನು ಭೂಮಿಯಲ್ಲಿ ಚೆಲ್ಲಿದರೆ ಧರಣಿಯು ದಗ್ಧವಾದೀತೆಂಬ ಭಯದಿಂದ ತನ್ನ ಪಾದ ಗಳಮೇಲೆ ಚೆಲ್ಲಿದನು ಶಾಪಕೊಡಲಿಕ್ಕೆ ಸಿದ್ಧವಾದ ಉದಕವು ಪಾದಗಳ ಮೇಲೆ ಬಿದ್ದ ಕೂಡಲೆ ಚರಣಗಳು ಕಪ್ಪಾಗಿ ಮಿತ್ರಸಹರಾಜನಿಗೆ ಕಿಲ್ಮಿಷಪಾದ ನೆಂಬ ಹೆಸರಾಯಿತು ನಂತರದಲ್ಲಿ ವಸಿಷ್ಠನು ಇದೇನಾಗಿರಬಹುದೆಂದು ಜ್ಞಾನ ದೃಷ್ಟಿಯಿಂದ ತಿಳಿದು ನಾನು ನಿನಗೆ ಅನ್ಯಾಯದಿಂದ ಶಪಿಸಿದೆನು. ಈ ದುಷ್ಟ ಕಾರ್ಯವನ್ನು ಓರ್ವ ರಾಕ್ಷಸನು ನಿನ್ನನ್ನು ವಂಚಿಸಿ,ಮಾಡಿರುವನು. ಉಪಾ ಯವಿಲ್ಲ! ನನ್ನಿಂದ ಕೊಡಲ್ಪಟ್ಟ, ಶಾಪವು ಎಂದಿಗೂ ತಪ್ಪದು. ಕಾರಣ ಹನ್ನೆ ರಡು ವರುಷ ಬ್ರಹ್ಮರಾಕ್ಷಸನ ಜನ್ಮವನ್ನು ಅನುಭೋಗಿಸಿ, ಬಳಿಕ ನಿನ್ನ ದೇಹವನ್ನು ಪಡೆಯೆಂದು ಉಃಶಾಪವನ್ನು ಕೊಡಲಾಗಿ, ಮಿತ್ರಸಹರಾಜನು ಬ್ರಹ್ಮ ರಾಕ್ಷಸನ ರೂಪವನ್ನು ಧರಿಸಿ ಭಯಂಕರಧ್ವನಿ ಮಾಡುತ್ತ ಅರಣ್ಯವನ್ನು ಪ್ರವೇ ಶಿಸಿ ಸಂಚರಿಸುತ್ತಿದ್ದನು.

ಈ ಪ್ರಕಾರವಾಗಿ ಅರಣ್ಯದಲ್ಲಿ ರಾಜನು ಕೆಲವು ದಿನಗಳನ್ನು ಕಳೆಯುತ್ತಿ ರಲು, ಒಂದಾನೊಂದು ದಿವಸ ಓರ್ವ ಬ್ರಾಹ್ಮಣನು ತನ್ನ ಸ್ತ್ರೀಯಿಂದ ಯು ಕ್ತನಾಗಿ ಮಾರ್ಗಕ್ರಮಣ ಮಾಡುತ್ತ ಈ ಅರಣ್ಯವನ್ನು ಪ್ರವೇಶಿಸಿದನು. ಮಿತ್ರಸಹರಾಜನು ರಾಕ್ಷಸನಾದ ಪ್ರಯುಕ್ತ ಈ ದಂಪತಿಗಳನ್ನು ನೋಡಿದ ಕೂಡಲೆ ಸಂತುಷ್ಟನಾಗಿ ಓಡುತ್ತಬಂದು, ಈ ಬ್ರಾಹ್ಮಣನನ್ನು ಹಿಡಿದು ತಿನ್ನಲಿಕ್ಕೆ ಯತ್ನಿಸಿದನು. ಅದನ್ನು ವಿಪ್ರಸ್ತ್ರೀಯು ಕಂಡು ಬಹಳ ದೈನ್ಯ ದಿಂದ, "ಎಲೈ ರಾಜನೇ! ನೀನು ಇಂಥ ಅನ್ಯಾಯ ಕಾರ್ಯವನ್ನು ಮಾಡ ಬೇಡ! ನನ್ನ ಮಾಂಗಲ್ಯ ಸೂತ್ರವನ್ನು ಹರಿಯಬೇಡ!! ನೀನು ರಾಜಾಧಿ ರಾಜನಿದ್ದು ಬ್ರಹ್ಮಹತ್ಯಾ ಮಾಡಬಹುದೇ? ದಯಮಾಡಿ ನನ್ನ ಪತಿಗೆ ಜೀವ ದಾನಕೊಡು," ಎಂದು ಅನೇಕ ವಿಧದಿಂದ ಬೇಡಿದರೂ ರಾಜನು ಇವಳ ಮಾತನ್ನು ಲಕ್ಷಿಸದೆ, ಬ್ರಾಹ್ಮಣನ ದೇಹವನ್ನು ಬಿಚ್ಚಿ ರಕ್ತವನ್ನು ಕುಡಿದ.

ಆನಂದದಿಂದ ಕುಳಿತುಕೊಂಡನು. ಆವಾಗ ವಿಪ್ರಸ್ತ್ರೀಯು ಪತಿಯ ಅವಸ್ಥೆ ಯನ್ನು ನೋಡಿ, ಶೋಕಸಾಗರದಲ್ಲಿ ತಲ್ಲೀನಳಾಗಿ, ಆಹಾ ! ನನ್ನನ್ನು ಕೇಳು ವವರು ಇಲ್ಲದಂತಾಯಿತೇ ! ಈ ಅರಣ್ಯದಲ್ಲಿ ಎತ್ತಹೋಗಲಿ !!! ಯಾರೂ ನನ್ನ ಚಿಂತೆಯನ್ನು ಪರಿಹರಿಸುವವರಿಲ್ಲ !! ಪೂರ್ವದಲ್ಲಿ ಯಾವ ಸುದತಿಯ ವಲ್ಲಭನನ್ನು ಆಗಲಿಸಿದ್ದೇನೆಂದು ನನಗೆ ಈ ಹಾಡಾಯಿತು ? ಹಾ ರಾಕ್ಷಸ-ಶ್ರೇಷ್ಠಾ ! ನನ್ನನ್ನೂ ಭಕ್ಷಿಸಬಾರದೇ !! ಎಂದು ಅನೇಕ ತರವಾಗಿ, ಶೋಕಿಸುತ್ತಾ ಮುಂದಿನ ಪರಿಯನ್ನು ಕಾಣದೆ ಸಿಟ್ಟಿನಿಂದೆದ್ದು, "ಎಲೈ ಖೂಳ, ನಾದ ರಕ್ಕಸನೇ ! ಎಷ್ಟುಪರಿಯಿಂದ ಬೇಡಿಕೊಂಡರೂ ನನ್ನ ಬಿನ್ನಹವನ್ನು ಲಾಲಿಸದೆ ಪತಿಯನ್ನು ಹಿಂಸಿಸಿದಿಯಲ್ಲ !! ಮೂರ್ಖನೇ ನೀನು ಮಡದಿ ಯಾದ ಮದಯಂತಿಯಲ್ಲಿ ಎಂದು ಸುರತಕ್ರೀಡೆಮಾಡುವಿಯೋ ಆ ಂ ದೆ ಮರಣವಾಗಲಿ; ಇಷ್ಟೇ ಅಲ್ಲ!ಯಾವ ಸ್ತ್ರೀಯಭೋಗವೂ ನಿನಗೆ ದೊರೆಯಬೇಡ," ಎಂದು ಶಾಪವನ್ನು ಕೊಟ್ಟು ಚಿತೆಯನ್ನು ಸಿದ್ಧಮಾಡಿ ಪತಿಯೊಂದಿಗೆ ಅಗ್ನಿ ಪ್ರವೇಶಮಾಡಿದಳು.

ಇಷ್ಟು ಕಾಲದಲ್ಲಿ ರಾಜನಿಗೆ ಹನ್ನೆರಡು ವರ್ಷ ಸಮಾಪ್ತಿಯಾಗಲು ರಾಕ್ಷಸ ರೂಪವು ಹೋಗಿ ಪೂರ್ವದ ಮಿತ್ರಸಹರಾಜನ ರೂಪವು ಪ್ರಕಟವಾಯಿತು. ಆವಾಗ ರಾಜನು ತಾನು ಮಾಡಿದ ಕೃತ್ಯಕ್ಕೆ ಬಹಳೇ ವ್ಯಸನಪಟ್ಟು ಮುಂದೆ ತನ್ನ ವಂಶವು ಹೇಗೆ ನಡೆದೀತೆಂದು ಚಿಂತೆಮಾಡುತ್ತ ತನ್ನ ಕೃತ್ಯಕ್ಕೆ ಬೈ ಯುತ್ತಾ ಅಯೋಧ್ಯಾಪುರಿಯನ್ನು ಪ್ರವೇಶಿಸಿ ನಡೆದ ಸಂಗತಿಯನ್ನು ಮಡದಿಗೆ ಅರುಹಿದನು. ಆವಾಗ ಮದಯಂತಿಯು ಪತಿಯ ಕೃತ್ಯವನ್ನು ಕೇಳಿ ಚಿಂತಾ ಪರವಶಳಾಗಿ ಮುಂದೆ ನಮ್ಮ ವಂಶವು ನಡೆಯದಂತಾಯಿತಲ್ಲ ! ಪುತ್ರನಿಲ್ಲದ ವಿನಾ ಗತಿಯಿಲ್ಲವೆಂದು ಶ್ರುತಿಯು ಹೇಳುವದಲ್ಲ !!" ಎಂದು ಶೋಕಿಸುತ್ತಿ ರಲು ರಾಜನು ಸ್ವಕೀಯ ಧರ್ಮಗ್ರಂಥವನ್ನು ವಿಚಾರಿಸಿ ಕುಲಗುರುಗಳಾದ ವಸಿಷ್ಠರಿಂದ ಮದಯಂತಿಯಲ್ಲಿ ಪುತ್ರೋತ್ಪಾದನಮಾಡಿಸಿ ತಾನು ಅರಣ್ಯವನ್ನು ಪ್ರವೇಶಮಾಡಿದನು. ಮಿತ್ರಸಹರಾಜನು ಕಾನನದಲ್ಲಿ ಹೋಗುತ್ತಾ ಹಿಂತಿರುಗಿ ನೋಡಲಾಗಿ ಬ್ರಾಹ್ಮಣನನ್ನು ಕೊಂದ ಬ್ರಹ್ಮಹತ್ಯಾ-ದೋಷವು ಕೃಷ್ಣವರ್ಣ ವಿಶಿಷ್ಟನಾಗಿ ಭಯಂಕರ ರೂಪದಿಂದ ತನ್ನ ಹಿಂದೆಯೇ ಬರುತ್ತಿತ್ತು. ಅದನ್ನು ಕಂಡು ಆಹಾ ! ಈ ಪಿಶಾಚಿರೂಪೀಪಾತಕವು ಹೇಗೆ ಹೋದೀತೆಂದು ಚಿಂತಿ ಸುತ್ತ ಅನೇಕ ಕ್ಷೇತ್ರಗಳಿಗೆ ಹೋದನು. ಎಷ್ಟೋ ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡಿ ದಾನ-ಧರ್ಮಗಳನ್ನು ಮಾಡಿದನು. ಆದರೂ ಬ್ರಹ್ಮಹತ್ಯಾ ದೋಷವು ಹಿಂತಿರುಗಲಿಲ್ಲ. ಅದರಿಂದ ರಾಜನು ಅತ್ಯಂತ ವ್ಯಾಕುಲಚಿತ್ತನಾಗಿ, ಆಹಾ ! ಈ ಪಿಶಾಚವು ನನ್ನನ್ನು ಹೇಗೆ ಬಿಟ್ಟೀತೆಂದು ಚಿಂತಿಸುತ್ತಾ ಮಾರ್ಗಹಿಡಿದು ಮಥುರಾ ಪಟ್ಟಣದ ಸಮೀಪಕ್ಕೆ ಬಂದನು. ಅಲ್ಲಿ ಗಗನಚುಂಬಿತ ವೃಕ್ಷಗ ಳಿಂದಲೂ, ಮಲ್ಲಿಕಾದಿ ವನವೃಕ್ಷಗಳಿಂದಲೂ, ಚಕೋರ ಚಕ್ರವಾಕ ಶುಕಪಿಕ

ಮೊದಲಾದ ಮೃಗಗಳಿಂದಲೂ, ಅಗರು, ಚಂದನ, ಸಹಕಾರ, ಚಂಪಕಾದಿ ಕುಸುಮಗಳ ಸುವಾಸನೆಯಿಂದಲೂ ಶೋಭಿಸುವ ನಂದನವನ್ನು ನಿಂದಿಸುವ ಒಂದು ಉದ್ಯಾನವನ್ನು ಕಂಡು ಅದರಲ್ಲಿ ಪ್ರವೇಶಿಸಿ, ಒಂದು ಚೂತವೃಕ್ಷದ ಬುಡದಲ್ಲಿ ಕುಳಿತು ಸ್ವಲ್ಪ ವಿಶ್ರಾಂತಿ ಪಡೆದನು. ಅಷ್ಟರಲ್ಲಿ ಅದೇ ವನದಲ್ಲಿ ಎದುರಿಗೆ ತಪೋಧನರಾದ ಋಷಿಗಳಿಂದ ಸೇವಿಸುತ್ತಿರುವ ಶುದ್ಧ ಸ್ಫಟಿಕದಂತೆ ಹೊಳೆಯುವ, ಹಣೆಯಲ್ಲಿ ತ್ರಿಪುಂಡ್ರವನ್ನು ರೇಖಿಸಿರುವ, ಜಟಾಮುಕುಟದಿಂದ ಶೋಭಿಸುವ, ರುದ್ರಾಕ್ಷಿಮಾಲಿಕೆಯನ್ನು ಧರಿಸಿರುವ, ವ್ಯಾಘ್ರಾಂಬರದಲ್ಲಿ ಕುಳಿತಿರುವ, ಶೀತಕಿರಣದಂತೆ ಶಾಂತನಾದ-ನಿರ್ಮಲಾಂತಃಕರುಣನಾದ-ಗೌತುಮ ಮುನೀಶನನ್ನು ಕಂಡು ಹೃಷ್ಟಪುಷ್ಟನಾಗಿ ಸಮೀಪಕ್ಕೆ ಹೋಗಿ, ಸಾಷ್ಟಾಂಗ ನಮಸ್ಕಾರಮಾಡಿ ಮುಕುಳಿತ ಹಸ್ತನಾಗಿ ಎದುರಿಗೆ ನಿಲ್ಲಲು, ಗೌತುಮನು ಸೂರ್ಯವಂಶೋದ್ಭವನಾದ ಮಿತ್ರಸಹನನ್ನು ಆಶೀರ್ವದಿಸಿ ಹತ್ತರ ಕುಳ್ಳಿರಿಸಿಕೊಂಡು ಕುಶಲಕ್ಷೇಮವನ್ನು ವಿಚಾರಿಸಲಾಗಿ ರಾಜನು ಸಕಲ ಕುಶಲವನ್ನು ಹೇಳಿ ಕಣ್ಣುತುಂಬ ನೀರುತಂದು, "ಎಲೈ ಋಷಿಶ್ರೇಷ್ಠರೇ ! ನನ್ನನ್ನು ಬೆಂಬತ್ತಿ ಬರುವ ಪಿಶಾಚಿಯನ್ನು ನೋಡಿದಿರಾ ! ಇದು ನನ್ನನ್ನು ಬಹಳ ಕಾಡುತ್ತಿರುವದು," ಎಂದು ತೋರಿಸಿ ತನಗೆ ವಸಿಷ್ಠರಿಂದ ಶಾಪಬಂದ ಯಾವತ್ತೂ ವೃತ್ತಾಂತವನ್ನು ಹೇಳಲಾಗಿ, ಗೌತುಮನು, "ರಾಜೇಂದ್ರನೇ! ಯಾಕೆ ಚಿಂತೆ ಮಾಡುತ್ತೀ ? ಸ್ಮರಣ ಮಾತ್ರದಿಂದಲೇ ಸಕಲ ಪಾಪಗಳನ್ನು ವಿಧ್ವಂಸಮಾಡುವ ಗೋಕರ್ಣ ಕ್ಷೇತ್ರವು ಭೂಕೈಲಾಸವೆಂದು ಖ್ಯಾತಿಗೊಂಡಿರುವದು. ಅಲ್ಲಿ ಸಾಕ್ಷಾತ್ ಓಂಕಾರ ರೂಪಿಯಾದ ಪರಮೇಶ್ವರನು ಪಾರ್ವತಿಯಿಂದ ಯುಕ್ತನಾಗಿ ವಾಸಮಾಡಿರುವನು. ರಾಜಾ! ಆ ಕ್ಷೇತ್ರವನ್ನು ಎಷ್ಟೆಂದು ವರ್ಣಿಸಲಿ !! ಸಕಲ ಸುರಾಸುರರು ಶಂಕರನ ದರ್ಶನಾರ್ಥವಾಗಿ ಅಲ್ಲಿಯೇ ಇರುವರು. ಕಮಲನಾಭನು ಲಕ್ಷ್ಮಿಯಿಂದ ಸಹಿತನಾಗಿ ತಪಸ್ಸು ಮಾಡುತ್ತಿರುವನು. ಇಂದ್ರ-ನಾರದ-ಸನಕಾದಿಗಳೂ, ವಸಿಷ್ಠ-ಜಮದಗ್ನಿ ಮೊದಲಾದವರೂ ನಿತ್ಯದಲ್ಲಿ ಅಲ್ಲಿರುತ್ತಿರುವರು. ರಾಜಾ ! ವಿಶೇಷ ಹೇಳುವದೇನು ? ಅಲ್ಲಿ ಯಾವಾಗಲೂ ಶಿವನಾಮ-ಗರ್ಜನೆಯ ಹೊರ್ತು ಮತ್ತೊಂದು ಶಬ್ದವೇ ಕೇಳಬರುವದಿಲ್ಲ;ಅಲ್ಲಿ ರತಿಕ್ಕ ಕಲ್ಲು-ಕಟ್ಟಿಗೆಗಳೂ ದೇವತಾರೂಪವೆಂದೇ ತಿಳಿ. ಉಳಿದ ಕ್ಷೇತ್ರಗಳಲ್ಲಿ ಲಕ್ಷವರ್ಷ ತಪಸ್ಸ ಮಾಡಿದ ಫಲವು ಗೋಕರ್ಣದಲ್ಲಿ ಒಂದು ದಿವಸಮಾಡಿದ ತಪಸ್ಸಿನ ಫಲಕ್ಕೆ ಸರಿಯಾಗದು. ಉಳಿದ ಸ್ಥಳಗಳಲ್ಲಿ ಎಷ್ಟು ಪುಣ್ಯಕರ್ಮಗಳನ್ನು ಮಾಡಿದರೂ ಗೋಕರ್ಣೇಶನ ದರ್ಶನದಿಂದ ಬಂದಷ್ಟು ಪುಣ್ಯಬಾರದು. ರಾವಣ-ಕುಂಭಕರ್ಣಾದಿಗಳು ಅಲ್ಲಿಯೇ ತಪಸ್ಸುಮಾಡಿ ಮಹಾ ಸಿದ್ಧಿಯನ್ನು ಪಡೆದರು; ಗೋಕರ್ಣದಲ್ಲಿ ಪರಮೇಶ್ವರನನ್ನು ರಾವಣನೇ ಸ್ಥಾಪಿಸಿದನು," ಎಂದು ಹೇಳಲಾಗಿ ಮಿತ್ರಸಹರಾಜನು ಈ ಕಥೆಯನ್ನು ವಿಸ್ತರಿಸಿ ಹೇಳಬೇಕೆಂದು ಬಿನ್ನೈಸಲು ಆ ಮುನಿಪನಿಂತೆಂದನು.

ಎಲೈ ರಾಜೇಂದ್ರನೇ! ಪೂರ್ವದಲ್ಲಿ ರಾವಣನ ತಾಯಿಯಾದ ಕೈಕಸಿಯೆಂಬವಳು ತನ್ನ ಮಗನಿಗೆ ಯಾವಾಗಲೂ ವಿಜಯವಾಗಬೇಕೆಂಬ ಅಪೇಕ್ಷೆಯಿಂದ ಅವಳು ಸ್ವಚ್ಛವಾದ ಮಳಲನ್ನು ತಂದು, ಅದರಿಂದ ಒಂದು ಲಿಂಗವನ್ನು ಮಾಡಿ, ದಿನಾಲು ಅದನ್ನು ಭಕ್ತಿಪೂರ್ವಕವಾಗಿ ಪೂಜಿಸುತ್ತಿದ್ದಳು. ಆದರೆ ದೇವೇಂದ್ರನು ಒಂದಾನೊಂದು ದಿವಸ ಆ ಲಿಂಗವನ್ನು ಕಳವು ಮಾಡಿ ಸಮುದ್ರದಲ್ಲಿ ಒಗೆದನು. ಮರುದಿವಸ ಕೈಕಸಿಯು ತನ್ನ ಪೂಜೆಯ ಲಿಂಗವಿಲ್ಲದ್ದನ್ನು ಕಂಡು ಶೋಕಾಕ್ರಾಂತಳಾಗಿ ಕುಳಿತಿರುವಾಗ ರಾವಣನು ಬಂದು, ತಾಯಿಯ ದುಃಖವನ್ನು ವಿಚಾರಿಸಿ ನಿನಗೆ ಪರಮೇಶ್ವರನ ಆತ್ಮಲಿಂಗವನ್ನು ತಂದುಕೊಡುವೆನೆಂದು ಹೇಳಿ ಕೈಲಾಸಕ್ಕೆ ಹೊರಟನು. ಅಲ್ಲಿಂದ ಶಕಂಧರನು ಅಘೋರವಾದ ತಪಸ್ಸನ್ನು ಮಾಡುತ್ತಾ ಮನೋಹರಗಾನದಿಂದ ಶಿವಲೀಲೆಯನ್ನು ಕೊಂಡಾಡುತ್ತ, ತಾಂಡವನರ್ತನದಿಂದ ಶ್ರೀ ಶಂಕರನನ್ನು ಮೆಚ್ಚಿಸಿದನು. ಅದರಿಂದ ಪಾರ್ವತೀಧವನು ಪ್ರತ್ಯಕ್ಷನಾಗಿ ಬಂದು, "ಏನು ಬೇಡುವಿ?" ಎಂದು ಕೇಳಲಾಗಿ ದಶಕಂಠನು, "ದೇವಾ! ನಿನ್ನ ಆತ್ಮಲಿಂಗವನ್ನೂ, ಪಾರ್ವತಿಗೆ ಸಮಾನಳಾದ ಸ್ತ್ರೀಯನ್ನೂ ಕೊಡಬೇಕು" ಎಂದು ಬೆಸಗೊಳ್ಳಲಾಗಿ ಗಿರೀಶನು ಕೋಟಿಸೂರ್ಯಪ್ರಕಾಶಮಾನವಾದ ತನ್ನ ಆತ್ಮಲಿಂಗವನ್ನು ಕೊಟ್ಟು, "ರಾವಣನೇ! ಪಾರ್ವತಿಗೆ ಸಮಾನಳಾದ ಸ್ತ್ರೀಯು ಬ್ರಹ್ಮನಿಂದಲೇ ನಿರ್ಮಿತವಾಗಲಲ್ಲ. ಕಾರಣ ಪಾರ್ವತಿಯನ್ನೇ ತೆಗೆದುಕೊಂಡುಹೋಗು" ಎನ್ನಲಾಗಿ ಒಳ್ಳೇದೆಂದು ರಾವಣನು ಹಸ್ತದಲ್ಲಿ ಆತ್ಮಲಿಂಗವನ್ನು ಇರಿಸಿ, ಹೆಗಲಮೇಲೆ ಪಾರ್ವತಿಯನ್ನು ಕುಳ್ಳಿರಿಸಿ ಮಾರ್ಗಹಿಡಿದನು;

ಇತ್ತ ಗಣಪತಿ, ಷಣ್ಮುಖ, ನಂದಿ, ಭೃಂಗಿ ಮೊದಲಾದವರು ಶಂಕರನ ಹತ್ತಿರ ಬಂದು, "ದೇವಾ! ದುಷ್ಟ ರಕ್ಕಸನು ಸ್ತ್ರೀಯನ್ನು ಬೇಡಿದರೆ ಜಗನ್ಮಾತೆಯಾದ ಅಂಬಿಕೆಯನ್ನು ಕೊಡಬಹುದೆ?" ಎಂದು ಬೆಸಗೊಳ್ಳಲಾಗಿ ಶಂಕರನು ಸುಮ್ಮನೆ ಯಾಕೆ ಚಿಂತಿಸುವಿರಿ? ಪಾರ್ವತಿಯನ್ನು ರಕ್ಷಣಮಾಡಲಿಕ್ಕೆ ಆದಿನಾರಾಯಣನು ಸಮರ್ಥನೇ ಇರುವನೆಂದನು. ಅತ್ತ ಪಾರ್ವತಿಯು ನಾನು ದುರುಳನ ಹಸ್ತದಲ್ಲಿ ಸಿಲ್ಕಿದೆನೆಂದು ತಿಳಿದು ಮನಸ್ಸಿನಲ್ಲಿ ನಾರಾಯಣನನ್ನು ಸ್ಮರಿಸಹತ್ತಿದಳು. ಆವಾಗ ಭಕ್ತರ ಮನೋಗತವನ್ನು ತಿಳಿದವನಾದ (ಭಕ್ತಾಂತರ್ಭಾವಜ್ಞನಾದ) ಕಮಲಾಕಾಂತನು ವೃದ್ಧ ಬ್ರಾಹ್ಮಣ ವೇಷವನ್ನು ಧರಿಸಿ, ರಾವಣನ ಹತ್ತರಬಂದು, "ರಾವಣನೇ! ಹೆಗಲಮೇಲೆ ಯಾರನ್ನು ಕುಳ್ಳಿರಿಸಿಕೊಂಡಿರುವಿ?" ಎನಲಾಗಿ ರಾವಣನು ಗರ್ವದಿಂದ, "ಎಲೋ ಅದನ್ನು ಏನು ಕೇಳುವಿ? ನಾನು ಶಂಕರನಿಂದ ಪಾರ್ವತಿಯನ್ನು ಪಡೆದು ಹೆಗಲಮೇಲೆ ಕುಳ್ಳಿರಿಸಿಕೊಂಡು ಹೋಗುವೆನು" ಎನಲಾಗಿ ವೃದ್ಧವಿಪ್ರನು ನಕ್ಕು, "ರಾವಣಾ ನೀನು ಎಂಥಹುಚ್ಚನೋ! ಶಂಕರನು ನಿನಗೆ ಮೋಸಗೊಳಿಸಿ ಕುರೂಪಿಯಾದ ಸ್ತ್ರೀಯನ್ನು ಕೊಟ್ಟಿರುವನು. ಕೆಳಗಿಳಿಸಿ ನೋಡು" ಎನಲಾಗಿ ರಾವಣನು

ಹೆಗಲುಮೇಲೆಯಿದ್ದ ಪಾರ್ವತಿಯನ್ನು ಕೆಳಗಿಳಿಸಿ ನೋಡಲಾರಂಭಿಸಿದನು. ಅಂಬಿಕೆಯು ಹಲ್ಲಿಲ್ಲದವಳೂ, ಕಪ್ಪುಬಣ್ಣದವಳೂ, ಪೊಚ್ಚುಗಲ್ಲದವಳೂ, ತೀರ ಇಳಿವಯಸ್ಸಿನವಳೂ ಆದದ್ದನ್ನು ತಿಳಿದು ಶಂಕರನು ತನಗೆ ಮೋಸಗೊಳಿಸಿದನೆಂದು ಪುನಃ ಕೈಲಾಸಕ್ಕೆ ತೆರಳಿದನು. .... .... .... *

ಇತ್ತ ನಾರಾಯಣನು ಪಾರ್ವತಿಗೆ ಭದ್ರಕಾಳಿಯೆಂಬ ಹೆಸರಿಟ್ಟು ಅಲ್ಲಿಯೇ ಸ್ಥಾಪಿಸಿ ತನ್ನ ಸ್ವಸ್ಥಾನಕ್ಕೆ ಗಮನ ಮಾಡಿದನು. ರಾವಣನು ಶಂಕರನ ಹತ್ತಿರ ಬಂದು "ದೇವಾ! ನನ್ನನ್ನು ಮೋಸಗೊಳಿಸಿ ಕುರೂಪಿಯಾದ ಸ್ತ್ರೀಯನ್ನು ಕೊಡಬಹುದೇ?" ಎನಲಾಗಿ, ಪರಮೇಶ್ವರನು ರಾವಣಾ! ಪಾರ್ವತಿಯು ಮಹಾ ಮಾಯಾವಿಯು ನಿನ್ನನ್ನು ವಂಚಿಸಿ ಗಮನಮಾಡಿರುವಳು. ಇನ್ನು ನಿನಗೆ ಅವಳು ಸಿಕ್ಕುವದು ದುರ್ಲಭ, ಅವಳಿಗಾಗಿ ಆಶೆಯನ್ನು ಮಾಡಬೇಡ. ಮತ್ತೊಂದು ಉಪಾಯವನ್ನು ಹೇಳುವೆನು ಕೇಳು. ಪೂರ್ವದಲ್ಲಿ ವಿಷ್ಣುವು ಮೋಹಿನಿ ರೂಪಧರಿಸಿದ್ದು ನಿನಗಾದರೂ ವಿದಿತವಿರುವದಷ್ಟೇ! ಆದರಂತೆ ಬ್ರಹ್ಮದೇವನು ಓರ್ವ ಸ್ತ್ರೀಯನ್ನು ನಿರ್ಮಿಸಿರುವನು. ಅವಳು ಪಾತಾಳಲೋಕದಲ್ಲಿ ಮಾಯಾಸುರನ ಗೃಹದಲ್ಲಿ ಬೆಳೆಯುತ್ತಿರುವಳು, ಅವಳನ್ನು ನೀನು ವಿವಾಹಮಾಡಿಕೋ. ಅಲ್ಲಿಗೆ ಹೋಗತಕ್ಕ ಶಕ್ತಿಯನ್ನು ನಿನಗೆ ನಾನು ಕೊಡುವೆನೆನಲಾ ರಾವಣನು ಸಂತೋಷದಿಂದ ಆತ್ಮಲಿಂಗವನ್ನು ತೆಗೆದುಕೊಂಡು ಮಾರ್ಗಸ್ಥನಾಗುತ್ತಿರಲಿಕ್ಕೆ ಮೂತ್ರೋಪದ್ರವು ಬಹಳೇ ಆಯಿತು. .... .... ....

ಇತ್ತ ಸರ್ವದೇವತೆಗಳು ರಾವಣನ ಹಸ್ತದಲ್ಲಿನ್ನ ಲಿಂಗವನ್ನು ಭೂಮಿಯಲ್ಲಿರಿಸಬೇಕೆಂದು ಗಜಾನನನನ್ನು ಪ್ರಾರ್ಥಿಸಲಾಗಿ, ಅವನು 'ತಥಾಸ್ತು' ಎಂದು ವೃದ್ಧವಿಪ್ರನವೇಷವನ್ನು ಗ್ರಹಿಸಿ ಸಂಗಡ ಎಂಡು ಆಕಳುಗಳನ್ನು ತೆಗೆದುಕೊಂಡು ಹೊರಟನು. ಮಧ್ಯಮಾರ್ಗದಲ್ಲಿ ರಾವಣನಿಗೆ ಮೂತ್ರೋಪದ್ರವು ಅತಿಶಯವಾದ್ದರಿಂದ ಮನದಲ್ಲಿ ಆಲೋಚನೆ ಮಾಡಹತ್ತಿದನು. ಏನಂದರೆ–ಆಹಾ! ನನಗಾದರೂ ಮೂತ್ರೋಪದ್ರವು ಅತಿಶಯವಾಯಿತು. ಕೈಯಲ್ಲಿ ಲಿಂಗವನ್ನು ಹಿಡಿದುಕೊಂಡು ಮೂತ್ರವಿಸರ್ಜನಕ್ಕೆ ಕುಳಿತರೆ ದೋಷಬರುವದು ನೆಲದಲ್ಲಿ ಇಟ್ಟುಹೋದರೆ ಶಂಕರನು ಭೂಮಿಯಲ್ಲಿಟ್ಟ ಲಿಂಗವು ಪುನಃ ಕೈಯಲ್ಲಿ ಬಾರದೆಂದು ಹೇಳಿರುವನು, ಏನ ಮಾಡಬೇಕೆಂದು ಚಿಂತಿಸುವಷ್ಟರಲ್ಲಿಯೇ ಗಣಪತಿಯು ವೃದ್ಧಬ್ರಾಹ್ಮಣವೇಷದಿಂದ ರಾವಣನ ಹತ್ತಿರ ಬರಲಾಗಿ ದಶಕಂಥರನು, "ಎಲೈ ವೃದ್ಧನೇ! ನಾನು ಮೂತ್ರವಿಸರ್ಜನಕ್ಕೆ ಹೋಗುವೆನು. ನಾನು ಬರುವವರೆಗೂ ಈ ಲಿಂಗವನ್ನು ನಿನ್ನ ಹಸ್ತದಲ್ಲಿ ಇಂಟಿಕೊಂಡಿರುವೆಯಾ?" ಎನಲಾಗಿ ವೃದ್ಧನು, "ಅಯ್ಯಾ! ಅವಸರವಿರುವದು. ನನ್ನ ಆಕಳುಗಳು ದೂರ ಹೋಗುತ್ತವೆ. ನೀನು ತೀವ್ರವಾಗಿ ಬಂದರೆ ಹಿಡಕೊಂಡು ನಿಲ್ಲುವೆನು. ಇಲ್ಲದಿದ್ದರೆ ಇಲ್ಲಿಯೇ ಒಗೆದು ಹೋಗುವೆ," ಎನಲು ರಾವಣನು, "ವೃದ್ಧನೇ ನನ್ನನ್ನು ಮೂರಾವರ್ತಿ ಒದರುವದರೊಳಗೆ ಬರುವೆನು," ಎಂದು ಹೇಳಿ, ಅವನ

ಕೈಯಲ್ಲಿ ಆತ್ಮಲಿಂಗವನ್ನು ಕೊಟ್ಟು ತಾನು ಮೂತ್ರ-ವಿಸರ್ಜನಕ್ಕೆ ಕುಳಿತನು. ಕೆಲವು ಕಾಲವಾದ ಬಳಿಕ ವೃದ್ಧನು ರಾವಣನನ್ನು ಒದರಹತ್ತಿದನು. ರಾವಣನಿಗೆ ಮೂತ್ರವಿಶೇಷವಾಯಿತು. ಮತ್ತು ಕೈಸನ್ನೆಯಿಂದ ವೃದ್ಧನಿಗೆ ಇನ್ನೊಂದು ಸ್ವಲ್ಪ ನಿಲ್ಲೆಂದನು. ವೃದ್ಧನು ರಾವಣನನ್ನು ಮೂರಾವರ್ತಿ ಕೂಗಿ ಕೈಯಲ್ಲಿದ್ದ ಲಿಂಗವನ್ನು ಅಲ್ಲಿಯೇ ಸ್ಥಾಪಿಸಿ ಅದೃಶ್ಯನಾದನು. ರಾವಣನು ಅವಸರದಿಂದ ಎದ್ದು ಆ ಲಿಂಗವನ್ನು ಕೀಳಲೆತ್ನಿಸಿದನು. ಗಣಪತಿಯಿಂದ ಸ್ಥಾಪಿತನಾದ ಲಿಂಗವನ್ನು ಕೀಳಲಿಕ್ಕೆ ಶಕ್ತಿಸಾಲದೆ ವೃದ್ಧನ ಬೆನ್ನುಹತ್ತಿ ಭೂಮಿಯನ್ನು ಸೀಳಿಹೋಗುತ್ತಿರುವ ಗೋವಿನ ಕರ್ಣವನ್ನು ಓಡುತ್ತಬಂದು ಹಿಡಿದನು. ಆ ಗೋವು ತನ್ನ ಕಿವಿಯನ್ನು ಅವನ ಕೈಯಲ್ಲೇ ಬಿಟ್ಟು ಪಾತಾಳಕ್ಕೆ ಹೋಯಿತು. ಪುನಃ ರಾವಣನು ಆ ಕರ್ಣವನ್ನು ತೆಗೆದುಕೊಂಡು ಆದರಿಂದಲೇ ಲಿಂಗವನ್ನು ಸ್ಥಾಪನೆಮಾಡಿದನು. ಅಂದಿನಿಂದ ಆ ಲಿಂಗಕ್ಕೆ ಗೋಕರ್ಣ "ಮಹಾಬಳೇಶ್ವರ" ಎಂಬ ಹೆಸರು ಪ್ರಸಿದ್ಧವಾಯಿತು. ಪ್ರತಿದಿವಸ ರಾವಣನ ತಾಯಿಯಾದ ಕೈಕಸಿಯು ಗೋಕರ್ಣಕ್ಕೆ ಬಂದು ಪೂಜೆಮಾಡುತ್ತಿದ್ದಳು. ರಾವಣ ಕುಂಭಕರ್ಣಾದಿಗಳು ಅಲ್ಲಿಯೇ ತಪಸ್ಸುಮಾಡಿ ಸಮಸ್ತ ಸುರಾಸುರರಿಗೆ ಅಜಿಂಕ್ಯರಾದರು. ಗೋಕರ್ಣ-ಕ್ಷೇತ್ರವನ್ನು ವರ್ಣಿಸುವದು ಆದಿಶೇಷನಿಂದಲೂ ಅಸಾಧ್ಯವೆಂದು ತಿಳಿ. ರಾಜಾ! ಏನುಹೇಳಲಿ! ಸಧ್ಯಕ್ಕೆ ನಾನು ಗೋಕರ್ಣ-ಕ್ಷೇತ್ರದಿಂದ ಮಿಥಿಲೇಶನಾದ ಜನಕರಾಜನ ಯಜ್ಞಾರ್ಥವಾಗಿ ಹೊರಟಿರುವೆ; ಈ ಮುಂಚೆ ನಾನು ಬರುವಮಾರ್ಗದಲ್ಲಿ-ಒಂದು ಸರೋವರವಿದ್ದು, ಆದರ ದಡದಲ್ಲಿದ್ದ ಆಲದಮರದ ಬುಡದಲ್ಲಿ ವಿಶ್ರಾಂತ್ಯರ್ಥವಾಗಿ ಕೆಲವು ಹೊತ್ತು ಕುಳಿತಿದ್ದೆ; ಅಲ್ಲಿಯೇ ಒಂದು ಚಮತ್ಕಾರದ ಮಹಿಮೆಯನ್ನೂ ಕಂಡೆ. ಆದೇನಂದರೆ:—

ನಾನುಕುಳಿತಿರುವ ಸ್ಥಳದಿಂದ ಕೆಲವು ಅಂತರದ ಮೇಲೆ ವೃದ್ಧಳಾದ — ಒಣಗಿದ ದೇಹವುಳ್ಳ, ಕಫರೋಗದಿಂದ ಪೀಡಿತಳಾದ-ಹಸಿವೆನೀರಡಿಕೆಯಿಂದ ಬಳಲುವ-ಬಿಸಿಲಿನ ತಾಪದಿಂದ ಭೂಮಿಯಲ್ಲಿ ಹೊರಳಾಡುತ್ತಿರುವ, ದುರ್ಗಂಧವಿಶಿಷ್ಟಳಾದ ಓರ್ವ ಚಾಂಡಾಲಿನಿಯು ದಿಗಂಬರಳಾಗಿ ವ್ಯಥೆಪಡುತ್ತಿರಲು ಅವಳಿಗೆ ಮರಣಕಾಲ ಸಮೀಪವಾಯಿತು. ಅದೇಕಾಲದಲ್ಲಿ ಆಕಾಶ ಮಾರ್ಗದಿಂದ ಸೂರ್ಯನೇ ಭೂಮಿಗೆ ಇಳಿಯುವಂತೆ ದೇದಿಪ್ಯಮಾನವಾದ ವಿಮಾನದಲ್ಲಿ ಚಂದ್ರಾಯುಧಧಾರಕರೂ, ಮುಕುಟ-ಶೋಭಿತರೂ, ಶೂಲಧಾರಿಣಿಗಳೂ ಆದ ಶಿವದೂತರು ಕುಳಿತು ಆ ಚಾಂಡಾಲಿನಿಯ ಹತ್ತರ ಬಂದರು. ಅವರನ್ನು ನೋಡಿ ಸಂತೋಷ ಭರಿತನಾಗಿ ಅವರಿಗೆ ಸಾಷ್ಟಾಂಗಮಾಡಿ ಏನು ಕಾರಣಬಂದೀರೆಂದು ಪ್ರಾರ್ಥಿಸಲಾಗಿ ಅವರು, "ಎಲೈ ಮುನೀಶನೇ! ಈ ಚಾಂಡಾಲಿನಿಯನ್ನು ಕೈಲಾಸಕ್ಕೆ ಕರೆದೊಯ್ಯುಲಿಕ್ಕೆ ಬಂದೆವು," ಎನಲಾಗಿ ಅವರ ಮಾತಿಗೆ ನಾನು ಆಶ್ಚರ್ಯಪಟ್ಟು, "ಎಲೈ! ಪುಣ್ಯವಂತನೇ! ಇವಳು ಎಂದಾದರೂ ಶಿವವ್ರತವನ್ನು ಮಾಡಿಲ್ಲ; ಶಿವಪೂಜೆಮಾಡಿಲ್ಲ; ಒಂದಾವರ್ತಿಯಾದರೂ ಶಿವಸಸ್ಮರಣೆ

ಮಾಡಿಲ್ಲ; ಒಮ್ಮೆಯಾದರೂ ಸ್ನಾನ, ಉಪವಾಸಗಳನ್ನು ಮಾಡಲಿಲ್ಲ. ಮಹಾ ಪಾಪಿಷ್ಟಳಾದ- ಅಶುಚಿಯುಳ್ಳಾದ ಈ ಚಾಂಡಾಲಿನಿಯನ್ನು ಹೇಗೆ ಕೈಲಾಸಕ್ಕೆ ಒಯ್ಯುವಿರಿ?" ಎಂದು ಬೆಸಗೊಳ್ಳಲಾಗಿ ಅವರು ಮುನಿಪನೇ! ಇವಳ ವೃತ್ತಾಂತ ವನ್ನು ಕೇಳೆಂದು ಹೇಳತೊಡಗಿದರು.

ಈ ಚಾಂಡಾಲಿನಿಯು ಪೂರ್ವದಲ್ಲಿ"ಕೈಕೆಯಿ"ಎಂಬ ಬ್ರಾಹ್ಮಣಳಪುತ್ರಿಯು. ಇವಳಿಗೆ 'ಸುಮಿತ್ರಾ' ಎಂದು ಕರೆಯುತ್ತಿದ್ದರು. ಇವಳ ನೇತ್ರಗಳಿಗೆ ಚಕೋರವೂ. ಕುಚಗಳಿಗೆ ಚಕ್ರವಾಕವೂ, ಮಂದಗಮನಕ್ಕೆ ಹಂಸವೂ, ಸೂಕ್ಷ್ಮ ಕಟಿಗೆ ಸಿಂಹವೂ ಸುಂದರ ಮುಖಕ್ಕೆ ಚಂದ್ರನೂ ನಾಚಿ ತಲೆಯನ್ನು ಬಾಗಿಸಿದ್ದರು ತಪ್ತಸುವರ್ಣದಂತೆ ಕಾಂತಿಯುಳ್ಳ, ರತಿಯನ್ನು ನಿಂದಿಸುವ, ಈ ಸುಮಿತ್ರೆಯನ್ನು ನೋಡಿ ಇವಳ ತಂದೆಯು ಒಬ್ಬ ಬ್ರಾಹ್ಮಣನಿಗೆ ಮದುವೆ ಮಾಡಿಕೊಟ್ಟನು. ಇವಳ ದುರ್ದೈವದಿಂದ ಪತಿಯು ಮೃತಪಟ್ಟನು. ಬಾಲ್ಯದಲ್ಲಿ ತನ್ನ ಕುವರಿಗೆ ವೈಧವ್ಯ ಪ್ರಾಪ್ತವಾದದ್ದನ್ನು ಕಂಡು ಚಿಂತಾತುರನಾಗಿ ಮಗಳನ್ನು ತನ್ನ ಮನೆಯಲ್ಲಿ ಇರಿಸಿಕೊಂಡನು ಕೆಲವು ಕಾಲ ಕಳೆದ ಬಳಿಕ ಸುಮಿತ್ರೆಗೆ ಯೌವನ ಪ್ರಾಪ್ತವಾಗಲು ಸ್ಮರಶರಬಾಧೆಯನ್ನು ತಡೆಯದೆ ಜಾರಕರ್ಮದಲ್ಲಿ ಆಸಕ್ತಳಾದಳು. ಕೈಕೆಯಿಯು ಇದು ನಿನಗೆ ಉಚಿತವಲ್ಲವೆಂದು ಎಷ್ಟುಪರಿ ತಿಳಿಹೇಳಿದರೂ ಅವಳು ಕೇಳಲಿಲ್ಲ. ಸುಮಿತ್ರೆಯು ಗರ್ಭವನ್ನು ಧರಿಸಿದಳು. ಗರ್ಭಿಣಿಚಿನ್ಹವನ್ನು ಕಂಡು ಜನರೆಲ್ಲರೂ ಹಳಿಯಲಾರಂಭಿಸಿದರು, ಆವಾಗ್ಗೆ ಕೈಕೆಯಿಯು ಜನರ ನಿಂದೆಯನ್ನು ಸಹಿಸದೆ ಮಗಳನ್ನು ಮನೆಬಿಟ್ಟು ಹೋಗೆಹಾಕಿದಳು. ಆಗ ಸುಮಿತ್ರೆಯು ಊರೂರು ತಿರುಗುತ್ತ ಓರ್ವ ಶ್ರೀಮಂತ ಶೂದ್ರನನ್ನು ಕೂಡಿಕೊಂಡು ಅವನ ಮಂದಿರದಲ್ಲಿಯೇ ಇದ್ದಳು. ದಿನಾಲು ಮಧ್ಯವನ್ನೂ, ಮಾಂಸವನ್ನೂ ಗ್ರಹಣ ಮಾಡಿದಳು. ಒಂದಾನೊಂದು ದಿವಸ ಆ ಶೂದ್ರನು ಹೊರಗೆ ಹೋದ ಕಾಲದಲ್ಲಿ ಸುಮಿತ್ರೆಯು ಯತೇಚ್ಛವಾಗಿ ಸುರಾಪಾನಮಾಡಿ ದಾರುಣವಾದ ನಿಶೆಯಿಂದ ಪೀಡಿತಳಾಗಿ ಕರದಲ್ಲಿ ಶಸ್ತ್ರವನ್ನು ಧರಿಸಿ ಗೃಹದ ಮುಂಭಾಗದಲ್ಲಿ ಕಟ್ಟಿದ ಆಕಳುಕರುವನ್ನು ಮೇಕೆಯ ಮರಿಯೆಂದು ತಿಳಿದು ವಧೆಮಾಡಿದಳು. ಆ ಕಾಲದಲ್ಲಿ ಗೋವು ಎಷ್ಟು ಆಕ್ರೋಶಮಾಡಿದರೂ ಸುರಾಪಾನದಿಂದ ಮತ್ತಳಾದ ಕಾರಣ ಅದರ ಶಬ್ದವನ್ನು ಸ್ವಲ್ಪಾದರೂ ಕೇಳಲಿಲ್ಲ ಬಳಿಕ ಅದರ ಶಿರಸ್ಸನ್ನು ಒಳಗೆ ತೆಗೆದುಕೊಂಡು ಹೋಗಿ ಕಣ್ದೆರೆದು ನೋಡಿ ಆಕಳುಕರುವಿನ ಮುಖವನ್ನು ಕಂಡು ಕನಿಕರಪಟ್ಟು, ಶಿವಶಿವಯೆಂದು ನುಡಿದು, ಅದರ ಸ್ವಲ್ಪ ಮಾಂಸವನ್ನು ಭಕ್ಷಿಸಿ ಪುನಃ ಆ ಶಿರವನ್ನು ಹೊರಗೆ ಒಗೆದು ಹುಲಿಯು ನನ್ನ ಆಕಳುಕರುವನ್ನು ತಿಂದಿತೆಂದು ಕೂಗಿದಳು. ಇಷ್ಟರಲ್ಲಿಯೇ ಇವಳಿಗೆ ಮರಣ ಸಮಯ ಪ್ರಾಪ್ತವಾದ್ದರಿಂದ ಯಮದೂತರು ಬಂದು ಇವಳನ್ನು ಹೊಡೆಯುತ್ತ, ಬಡೆಯುತ್ತ, ಮಹಾಕ್ಲೇಶ ಕೊಟ್ಟು ಯಮಧರ್ಮನೆಡೆಗೆ ಎಳೆದೊಯ್ದರು. ಯಮನು ಇವಳ ಪುಣ್ಯ ಪಾಪ

ಗಳೆಲ್ಲವನ್ನೂ ಚಿತ್ರಗುಪ್ತರಿಂದ ವಿಚಾರಿಸಿ ಗೋವತ್ಸ ಸಂಹಾರಾನಂತರ ಇವಳನ್ನು ಮುಂದೆ ಚಂಡಾಲಿನಿಯಾಗಿ ಹುಟ್ಟುವಂತೆ ಮಾಡಿದ್ದನು. ಇವಳಿಗೆ ಪೂರ್ವಕರ್ಮ ಪ್ರಭಾವದಿಂದ ಬಾಲ್ಯದಲ್ಲಿಯೇ ಮಾತಾಪಿತರು ಮರಣಹೊಂದಿದರು. ಅದೇ ಪಾಪದಿಂದ ಉನ್ಮಾದಳೂ, ರೋಗಿಷ್ಟಳೂ ಆಗಿರುವಳು. ಒಂದಾನೊಂದು ದಿವಸ ಅನ್ನಾರ್ಥಿಯಾಗಿ ಊರೂರು ತಿರುಗುತ್ತ, ವರಾತ್ರಿ ಪೂಜೆಗೋಸ್ಕರ ಗೋಕರ್ಣಕ್ಷೇತ್ರಕ್ಕೆ ಹೊರಟು, ಯಾತ್ರಿಕರ ಸಂಗಡ ಇವಳೂ ಹೊರಟು ಅವರ ಎಂಜಲುವನ್ನು ತಿನ್ನುತ್ತಾ, ಗೋಕರ್ಣ-ಕ್ಷೇತ್ರಕ್ಕೆ ಮುಟ್ಟಿದಳು. ಅವೊತ್ತು ಶಿವರಾತ್ರಿಯಿದ್ದ ಪ್ರಯುಕ್ತ ಎಲ್ಲರೂ ಸ್ನಾನಮಾಡಿ ಮಹಾಬಲೇಶ್ವರನ ದರ್ಶನಕ್ಕೆ ಗಮಿಸಿದರು. ಮಧ್ಯಾಹ್ನ-ಸಮಯದಲ್ಲಿ ಈ ಚಾಂಡಾಲಿನಿಯು ಕಂಡಕಂಡವರಿಗೆ ಭಿಕ್ಷೆಬೇಡಲಾರಂಭಿಸಿದಳು. ಉಪವಾಸದ ತಿಥಿಯಿದ್ದ ಕಾರಣ ಇವಳಿಗೆ ಯಾರೂ ಅನ್ನವನ್ನು ಹಾಕದಿರಲು, ಓರ್ವ ಭಕ್ತನು ಬಂದು ಇವಳ ಕೈಯಲ್ಲಿ ಬಿಲ್ವದಳವನ್ನು ಬಿಸುಟಿಹೋದನು. ಹಸ್ತದಲ್ಲಿ ಬಿದ್ದ ಬಿಲ್ವದಳವನ್ನು ಕೈಯಾಡಿಸಿ ಇದು ತಿನ್ನುವ ಪದಾರ್ಥವಲ್ಲವೆಂದು ಬಿಸುಟಿದಳು. ಆ ದಳವು ಒಂದು ಲಿಂಗದ ಮೇಲೆ ಬಿದ್ದಿತು. ಇದರಿಂದ ಶಿವಲಿಂಗಾರ್ಚನೆಯಾದದ್ದಲ್ಲದೆ ಅನಾಯಾಸವೇ ಉಪೋಷಣವಾಯಿತು, ಮತ್ತು ರಾತ್ರಿಯಲ್ಲಿ ದೇವಾಲಯಕ್ಕೆ ಹೋಗಿರುವ ಮನುಷ್ಯರ ಗದ್ದಲದಿಂದಲೂ, ಶಿವಶಿವಯೆಂಬ ಘೋಷದಿಂದಲೂ, ಇವಳಿಗೆ ನಿದ್ರೆಯಿಲ್ಲದಂತಾಗಿ ತಾನೇ ಜಾಗರಣೆಯ ಫಲವೂ ಪ್ರಾಪ್ತವಾಯಿತು ಅಲ್ಲಿಂದ ಈ ಚಾಂಡಾಲಿಯು ಇಲ್ಲಿಯೇ ಬಂದು ಬಿದ್ದಿರುವಳು. ಈವೊತ್ತಿಗೆ ಇವಳ ಆಯುಷ್ಯ ಸಂಪೂರ್ಣವಾದದ್ದರಿಂದ ಪಾರ್ವತೀಶನ ಅಪ್ಪಣೆಯ ಮೇರೆಗೆ ಇವಳನ್ನು ಕೈಲಾಸಕ್ಕೆ ಕರೆದೊಯ್ಯುವೆವೆಂದು ಹೇಳಿದರು. ಚಾಂಡಾಲಿನಿಯು ತನ್ನ ದೇಹವನ್ನು ಬಿಟ್ಟು ಉತ್ತಮ ರೂಪವನ್ನು ಗ್ರಹಿಸಿ, ವಿಮಾನದಲ್ಲಿ ಕುಳಿತು ಶಿವಲೋಕಕ್ಕೆ ತೆರಳಿದಳು

ಕಾರಣ ಮಿತ್ರಸಹರಾಜನೆ! ನೀನಾದರೂ ಗೋಕರ್ಣಕ್ಕೆ ಹೋಗಿ ಶಿವರಾತ್ರಿದಿವಸ ಉಪೋಷಣೆಮಾಡಿ ಮಹಾಬಲೇಶ್ವರನನ್ನು ಪೂಜಿಸಿ, ರಾತ್ರಿಯಲ್ಲಿ ಜಾಗರಣೆ ಮಾಡಿದಿಯಾದರೆ ಸಕಲ ಪಾತಕಗಳಿಂದ ಮುಕ್ತನಾಗುವಿಯೆಂದು ಗೌತಮನು ಹೇಳಿ ಮಿಥಿಲಾ ಪಟ್ಟಣಕ್ಕೆ ತೆರಳಿದನು. ಅನಂತರದಲ್ಲಿ ಮಿತ್ರಸಹರಾಜನಾದರೂ ಗೋಕರ್ಣಕ್ಕೆ ಬಂದು ಶಿವರಾತ್ರಿ ದಿವಸ ಮಹಾಬಳೇಶ್ವರನನ್ನು ಯಥಾವಿಧಿಯಿಂದ ಪೂಜೆಮಾಡಿ ಸಕಲ ಪಾತಕಗಳಿಂದ ಮುಕ್ತನಾದನು. ನಂತರ ಕೈಲಾಸದಿಂದ ವಿಮಾನಪ್ರಾಪ್ತವಾಗಲು, ತನ್ನ ಪೂರ್ವಶರೀರವನ್ನು ಬಿಟ್ಟು ದಿವ್ಯದೇಹವನ್ನು ಧರಿಸಿ ವಿಮಾನಾರೂಢನಾಗಿ ಕೈಲಾಸಕ್ಕೆ ತೆರಳಿದನು.

ಮೂರನೇ ಅಧ್ಯಾಯ ಸಂಪೂರ್ಣವಾದುದು.



# ನಾಲ್ಕನೇ ಅಧ್ಯಾಯ

## ವಿಮರ್ಶನ, ಚಂದ್ರಸೇನ (ಶ್ರೀಕರ) ಇವರ ಕಥೆಗಳು.

## ವಿಮರ್ಶನ ರಾಜನ ಕಥೆ.

ಕಿರಾತದೇಶದಲ್ಲಿ ವಿಮರ್ಶನ ನೆಂಬ ರಾಜನು ಆಳುತ್ತಿದ್ದನು ಇವನು ಶೂರನೂ; ಧೈರ್ಯವಂತನೂ, ಪ್ರತಾಪಶಾಲಿಯೂ; ಜಿತಶತ್ರುವೂ ಇದ್ದು, ಸರ್ವಬೇಟೆಯಲ್ಲಿ ಆಸಕ್ತನೂ, ಸರ್ವ ಮಾಂಸಭಕ್ಷನೂ, ಚತುರ್ವರ್ಣದ ಸ್ತ್ರೀಯರನ್ನು ಉಪಭೋಗಿಸುವಂಥವನೂ ಆಗಿದ್ದನು. ಆದರೂ ಕೃಷ್ಣಪಕ್ಷ ಚತುರ್ದಶಿಯಲ್ಲಿಯೂ, ಸೋಮವಾರಪ್ರದೋಷದಲ್ಲಿಯೂ ತನ್ನ ವಿಭವ-ವಿಸ್ತಾರದಿಂದ ಶಂಕರನನ್ನು ಪೂಜಿಸಿ, ನೃತ್ಯಗಾನದಿಂದ ಪರಮೇಶ್ವರನನ್ನು ಸಂತೋಷಪಡಿಸುತ್ತಿದ್ದನು. ಇಂಥ ಗುಣಗಳಿಂದ ಕೂಡಿದ ರಾಜನನ್ನು ಕಂಡು ಮಡದಿಯಾದ ಕುಮುದ್ವತಿಯು, "ವಲ್ಲಭನೇ! ಇದೇನು ಆಶ್ಚರ್ಯ !! ನೀವು ಮಾಡತಕ್ಕ ಕರ್ಮಗಳನ್ನು ನೋಡಿದರೆ ಪಾಪಯುಕ್ತವಾದಂಥವುಗಳು ಪರಮೇಶ್ವರನಲ್ಲಿದ್ದ ನಿಮ್ಮ ಭಕ್ತಿಯನ್ನು ನೋಡಿದರೆ ದೊಡ್ಡ ದೊಡ್ಡ ಮುನೀಶ್ವರರ ಭಕ್ತಿಗಿಂತ ಅಧಿಕವಾಗಿರುವದು. ಇದರ ಕಾರಣವೇನಿರಬಹುದು ?" ಎಂದು ಕೇಳಲಾ ಭೂಪನಿಂತೆಂದನು. "ವಲ್ಲಭೆಯೇ! ಪೂರ್ವದಲ್ಲಿ ನಾನು ನಾಯಿಯಾಗಿ ಪಂಪಾಕ್ಷೇತ್ರದಲ್ಲಿ ತಿರುಗುತ್ತಿದ್ದೆನು. ಆಕಸ್ಮಾತ್ತಾಗಿ ನಾನು ಮಾಘ ಕೃಷ್ಣ ಚತುರ್ದಶೀ ದಿವಸ ಒಂದು ಶಿವಾಲಯದ ಮಹಾದ್ವಾರವನ್ನು ಪ್ರವೇಶಿಸಿದೆನು ಅಲ್ಲಿ ಬ್ರಾಹ್ಮಣರು ಶಿವಪೂಜೆಯನ್ನು ಮಾಡುತ್ತಿದ್ದರು; ಹೊರಬಾಗಿಲ ಬಲಿಪಿಂಡಗಳನ್ನು ಇಟ್ಟಿದ್ದರು. ಅವುಗಳನ್ನು ತಿನ್ನಬೇಕೆಂದು ಹೊಂಚುಹಾಕಿಕೊಂಡು ಕುಳಿತ ನನ್ನನ್ನು ನೋಡಿ ರಾಜದೂತರು ದಂಡದಿಂದ ಪ್ರಹಾರ ಮಾಡತ್ತಿದ್ದರು. ಅವರು ಹೊಡೆದ ಕೂಡಲೆ ಓಡುತ್ತಾ ದೇವಾಲಯವನ್ನು ಪ್ರದಕ್ಷಿಣೆ ಮಾಡಿ ಪುನಃ ಪುನಃ ಅಲ್ಲಿಯೇ ಬರಹತ್ತಿದೆನು ಅದನ್ನು ಕಂಡು ರಾಜದೂತರು ಕೋಪಾವಿಷ್ಟರಾಗಿ ಬಲವಾದ ಬಾಣದಿಂದ ಹೊಡೆದಕೂಡಲೆ ಪರಮೇಶ್ವರನ ಪೂಜೆಯನ್ನವಲೋಕಿಸುತ್ತಾ ಪ್ರಾಣಬಿಟ್ಟೆನು. ಆದರಿಂದ ನಾನು ಭೂಪತಿಯಾಗಿ ಜನಿಸಿರುವೆನು. ಶ್ವಾನವು ಕೆಟ್ಟಮಾರ್ಗದಲ್ಲಿರುವ ಪ್ರಯುಕ್ತ ಈ ಪಾಪಾಚರಣೆಯು ನನ್ನನ್ನು ಸೇರಿರುವದು," ಎಂದು ಹೇಳಲಾಗಿ ಕುಮುದ್ವತಿಯು, "ವಲ್ಲಭನೇ ! ನಿನಗೆ ಪೂರ್ವಜನ್ಮದ ಜ್ಞಾನವಿರುವದು. ನಿನ್ನ ಕಥೆಯನ್ನು ಹೇಗೆ ಹೇಳಿದೆಯೋ ಅದರಂತೆಯೇ ನನ್ನ ಅಖ್ಯಾನವನ್ನಾದರೂ ನಿವೇದಿಸಬೇಕು," ಎಂದು ಬೆಸಗೊಳ್ಳಲಾ ಕಿರಾತರೊಡೆಯ ನಿಂತೆಂದನು.

"ಪ್ರಿಯೇ ! ಪೂರ್ವದಲ್ಲಿ ನೀನು ಕಪೋತ-ಪಕ್ಷಿಯಾಗಿದ್ದಿ. ಒಂದಾನೊಂದು ದಿವಸ ನಿನಗೆ ಒಂದು ಮಾಂಸ ಪಿಂಡ ದೊರೆಯಲು ಅದನ್ನು

ಚುಂಚುಪುಟದಿಂದ ಕಚ್ಚಿಕೊಂಡು ಆಕಾಶ ಮಾರ್ಗದಲ್ಲಿ ಗಮಿಸಲಾಗಿ, ನಿನ್ನನ್ನು ಕಂಡು ಒಂದು ಗರುಡ ಪಕ್ಷಿಯು ಬೆನ್ನಟ್ಟಿ ಬರಲಾಗಿ, ನೀನು ಪ್ರಾಣಭಯದಿಂದ ಓಡುತ್ತೋಡುತ್ತ ಶ್ರೀ ಶೈಲವನ್ನು ಪ್ರದಕ್ಷಿಣೆಮಾಡಿ ಧ್ವಜಸ್ತಂಭದಲ್ಲಿ ಕೂಡು ವಪ್ಪುದರಲ್ಲಿಯೇ ಅದು ಬಂದು ನಿನ್ನ ಪಾದಪ್ರಹಾರ ಮಾಡಲು ದೇವಾಲಯದ ಮುಂದೆ ಬಿದ್ದು ಪ್ರಾಣವನ್ನು ಬಿಟ್ಟೆಯಾದಕಾರಣ ನನ್ನರಾಣಿಯಾಗಿ ಜನಿಸಿದಿ," ಎಂದು ಹೇಳಲಾಗಿ ಕುಮುದ್ವತಿಯು ಕೇಳಿ ಆಶ್ಚರಿಪಟ್ಟು ಶಿವಮಹಿಮೆಯನ್ನು ಹೊಗಳುತ್ತ, "ಪ್ರಾಣೇಶ್ವರನೇ ! ಮುಂದೆ ನಾವು ಯಾವ ಯಾವ ಜನ್ಮಗಳನ್ನು ಪಡೆಯುವೆವು ?" ಎನಲಾಗಿ ರಾಜನು, "ಪ್ರಿಯಳೇ! ಎರಡನೇ ಜನ್ಮದಲ್ಲಿ ನಾನು ಸಿಂಧು-ದೇಶದ ರಾಜನಾಗುವೆನು ನೀನು ಜಯಾ ಎಂಬ ಸ್ತ್ರೀಯಾಗಿ ನನ್ನನ್ನೇ ವರಿಸುವಿ. ಮೂರನೇ ಜನ್ಮದಲ್ಲಿ ಸೌರಾಷ್ಟ್ರ ದೇಶಾಧಿಪನಾಗುವೆನು. ನೀನು ಕಳಿಂಗ ರಾಜನ ಮಗಳಾಗಿ ನನ್ನನ್ನೇ ವಿವಾಹಮಾಡಿಕೊಳ್ಳುವಿ. ನಾಲ್ಕನೇ ಜನ್ಮದಲ್ಲಿ ಗಾಂಧಾರಿಪನಾಗುವೆನು. ನೀನು ಮಗಧ ರಾಜನ ತನಯಳಾಗಿ ನನಗೇ ಮಾಲೆ ಹಾಕುವಿ. ಐದನೇ ಜನ್ಮದಲ್ಲಿ ಅಮಥಿನಾಥನಾಗುವೆನು. ನೀನು ದಾಶಾರ್ಹನ ಪುತ್ರಿಯಾಗಿ ನನ್ನ ವಲ್ಲಭಿಯಾಗುವಿ. ಆರನೇ ಜನ್ಮದಲ್ಲಿ ಆನರ್ತೇಶನಾಗುವೆನು. ನೀನು ಯಯಾತಿರಾಜನ ಕನ್ನಿಕೆಯಾಗಿ, ನನ್ನನ್ನೇ ವಿವಾಹಮಾಡಿಕೊಳ್ಳುವಿ. ಏಳನೇ ಜನ್ಮದಲ್ಲಿ ಪಾಂಡ್ಯದೇಶಧಿಪನಾಗುವೆನು ನೀನು ಪದ್ಮರಾಜನ ಉದರದಲ್ಲಿ ಜನಿಸಿ ಕುಸುಮಾವತಿಯೆಂಬ ನಾಮವನ್ನು ಪಡೆದು ನನ್ನ ಕರಗ್ರಹಣವನ್ನೇ ಮಾಡುವಿ. ಆ ಕಾಲದಲ್ಲಿ ನಾನು ಸಕಲ ಗುಣಗಳಿಂದಲಂಕೃತನಾಗಿ ಧರ್ಮದಿಂದ ರಾಜ್ಯಭಾರಮಾಡುತ್ತಾ ಶತ್ರು ನಿಚಯವನ್ನು ಸಂಹರಿಸಿ, ಅಂತ್ಯದಲ್ಲಿ ಪುತ್ರನಿಗೆ ಯಾವತ್ತನ್ನು ಒಪ್ಪಿಸಿ ನಿನ್ನಿಂದ ಕೂಡಿ ಆರಣ್ಯವನ್ನು ಪ್ರವೇಶಿಸಿ, ತಪಸ್ಸು ಮಾಡಿ ಅಗಸ್ತ್ಯಮುನಿಯಿಂದ ಶಿವದೀಕ್ಷೆಯನ್ನು ಪಡೆದು, ಮುಂದೆ ನಿನ್ನಿಂದ ಕೂಡಿಕೊಂಡು ಕೈಲಾಸಕ್ಕೆ ತೆರಳುವೆನು. ನೋಡಿದಿಯಾ! ಶಿವದೀಕ್ಷೆಯಮಹಿಮೆಯನ್ನು !! ಎಂದು ಪತ್ನಿಗೆ ನಿವೇದಿಸಿದನು.

---

# ಚಂದ್ರಸೇನ ( ಶ್ರೀಕರ ) ನ ಕಥೆ

ಧರಣೀಮಂಡಲದಲ್ಲಿ ಸಕಲ ಕಲಾಭರಿತವಾಗಿರುವ ಉಜ್ಜಯಿನೀಪಟ್ಟಣದಲ್ಲಿ ಸಕಲ ಸದ್ಗುಣಗಳಿಂದ ಪರಿಪೂರ್ಣನಾದ ಚಂದ್ರಸೇನ ನೆಂಬ ಭೂಪತಿಯು ರಾಜ್ಯವಾಳುತ್ತಿದ್ದನು, ಇವನು, ಪಾರ್ವತೀಶನ ಪೂಜೆಯಿಂದ ಚತುರ್ವಿಧ ಪುರುಷಾರ್ಥಗಳೂ, ಅಷ್ಟಮಹಾಸಿದ್ಧಿ ನವನಿಧಿಗಳೂ ದೊರೆಯುವವೆಂದು ತಿಳಿದು ಅನನ್ಯಭಾವದಿಂದ ಪರಮೇಶ್ವರನ ಪಾದಾರವಿಂದವನ್ನು ಭಜಿಸುತ್ತಾ ಶಿವದೀಕ್ಷೆಯನ್ನು ಪಡೆದಿದ್ದನು. ಇವನಿಗೆ ಮಣಿಭದ್ರನೆಂಬ ಜೀವಸಖನು, ಉತ್ತಮವಾದ ತಾಂಬ್ರ, ಹಿತ್ತಾಳಿ; ಕಂಚು, ಕಬ್ಬಿಣಗಳಿಗೆ ಮುಟ್ಟಿಸಿದ ಕೂಡಲೇ

ಸುವರ್ಣವಾಗುವ ಒಂದು ಮಣಿಯನ್ನು ಕೊಟ್ಟನು. ಆ ಮಣಿಪ್ರಭಾವದಿಂದ ಚಂದ್ರಸೇನ ರಾಜನು ಯಾವ ಕದನಗಳಲ್ಲಿಯಾದರೂ ಜಯವನ್ನೇ ಪಡೆಯುತ್ತಿದ್ದನು. ಇವನಿಗೆ ಶತ್ರುಗಳೆಲ್ಲ ಮಿತ್ರರಾಗಿದ್ದರು ಆ ಮಣಿಯ ಮಹಿಮೆಯಿಂದ ಇವನ ಐಶ್ವರ್ಯವು ದಿನದಿನಕ್ಕೆ ಹೆಚ್ಚುತ್ತಲಿತ್ತು. ಚಂದ್ರಸೇನ ರಾಜನು ಅದನ್ನು ಯಾವಾಗಲೂ ಕಂಠದಲ್ಲಿರಿಸಿಕೊಂಡು ಸೂರ್ಯನಂತೆ ಹೊಳೆಯುತ್ತಿದ್ದನು. ಇದನ್ನು ಕಂಡು ಉಳಿದ ರಾಜರೆಲ್ಲರೂ ಮನದಲ್ಲಿ ವ್ಯಾಕುಲಪಟ್ಟು ಎಲ್ಲರೂ ಒಟ್ಟಾಗಿ ಕೂಡಿ, ಈ ಮಣಿಯನ್ನು ತೆಗೆದುಕೊಳ್ಳಬೇಕೆಂದು ಆಲೋಚಿಸಿ ತಮ್ಮ ತಮ್ಮ ಸೈನ್ಯಗಳೊಂದಿಗೆ ಉಜ್ಜಯಿನಿಯ ಪ್ರದೇಶವನ್ನು ಹೊಕ್ಕು, ಚಂದ್ರಸೇನ ರಾಜನಿಗೆ ಮಣಿಯನ್ನು ನಮಗೆ ಕೊಡಬೇಕು. ಇಲ್ಲದಿದ್ದರೆ ನಮ್ಮ ಕೂಡ ಸಮರಕ್ಕೆ ಬರಬೇಕೆಂದು ಹೇಳಿಕಳುಹಲು, ರಾಜನು ಚಿಂತಾಕ್ರಾಂತನಾಗಿ, ಅಹಾ! ಇವರನ್ನು ಜಯಿಸುವ ಬಗೆ ಹೇಗೆ? ಸುಮ್ಮನೆ ಕುಳಿತರೆ ಕ್ಷತ್ರಿಯ ಧರ್ಮಕ್ಕೆ ಕುಂದು ಬರುವದಲ್ಲ! ಎಂದು ಆಲೋಚಿಸಿ, ಪರಮೇಶ್ವರನೇ ಪಾರು ಮಾಡಲೆಂದು ಮಹಾಕಾಲೇಶ್ವರನ ಪೂಜಾರ್ಥವಾಗಿ ಗಮನಮಾಡಿದನು. ಇತ್ತ ಚಂದ್ರಸೇನರಾಜನ ಮಂತ್ರಿಯು ಮನಸ್ಸಿನಲ್ಲಿ ಶಂಕರನನ್ನು ಧ್ಯಾನಿಸಿ, ಸಮರಾಂಗಣಕ್ಕೆ ಹೋಗಿ ಸಕಲ ಶತ್ರುಗಳನ್ನು ನಿರ್ಮೂಲ ಮಾಡಿ ಜಯಭೇರಿಯನ್ನು ಬಾರಿಸುತ್ತ ಉಜ್ಜಯಿನಿಗೆ ಬಂದನು.

ಅನಂತರ ಉಜ್ಜಯಿನಿಯ ನಿವಾಸಿಗಳು ತಮ್ಮ ರಾಜನು ಮಾಡುವ ಮಹಾಕಾಳಿಯ ಪೂಜೆಯನ್ನು ನೋಡುವದಕ್ಕಾಗಿ ದೇವಾಲಯಕ್ಕೆ ಬರಲಾರಂಭಿಸಿದರು. ಅದರಲ್ಲಿ ಓರ್ವ ವಿಧವೆಯಾದ-ಗೌಳಿಗರ ಮಾನಿನಿಯು ತನ್ನ ಆರುವರ್ಷದ ಬಾಲಕನೊಂದಿಗೆ ಅಲ್ಲಿಗೆ ಬಂದಿದ್ದಳು. ಆ ಹುಡುಗನು ರಾಜನು ಮಾಡುವ ಶಂಕರ ಪೂಜೆಯನ್ನು ಚೆನ್ನಾಗಿ ಮನಸ್ಸಿನಲ್ಲಿರಿಸಿಕೊಳ್ಳುತ್ತ ಅದನ್ನೇ ಅವಲೋಕಿಸುತ್ತಿದ್ದನು. ಅಷ್ಟರಲ್ಲಿ ಮಹಾಬಳೇಶ್ವರನ ಪೂಜೆಯು ಸಮಾಪ್ತವಾಗಲು, ಎಲ್ಲರು ತಮ್ಮ ತಮ್ಮ ಗೃಹಕ್ಕೆ ಬಂದು ಸೇರಿದರು ಗೌಳಿಗರವಳಾದರೂ ತನ್ನ ಬಿಡಾರಕ್ಕೆ ಬಂದು ಗೃಹಕೃತ್ಯದಲ್ಲಿ ತತ್ಪರಳಾಗಿರಲು, ಆ ಬಾಲಕನು ಹತ್ತರ ಇರುವ ಹೊಲದೊಳಗಿನ ಗುಡಿಸಲಲ್ಲಿ ಹೋಗಿ ಕುಳಿತು, ಒಂದು ಕಟ್ಟಿಗೆಯನ್ನು ತೆಗೆದುಕೊಂಡು ಅದರ ಮೇಲೆ ಮಣ್ಣಿನ ಪಿಂಡಿಕೆಯನ್ನಿಟ್ಟು ಪೂರ್ವದಲ್ಲಿ ರಾಜನು ಮಾಡಿದ ಪೂಜೆಯಂತೆಯೇ ತಾನೂ ಮಾಡಲಾರಂಭಿಸಿದನು. ತನ್ನ ಹತ್ತರ ಪುಷ್ಪ, ಅಕ್ಷತಾ, ಧೂಪ, ದೀಪಗಳಿಲ್ಲದ್ದರಿಂದ ಮಣ್ಣು, ಕಲ್ಲು, ಕಟ್ಟಿಗೆ, ಮೊದಲಾದವುಗಳನ್ನೇ ಅರ್ಪಿಸಿದನು. ಈಪ್ರಕಾರ ಯಥಾಸಾಂಗವಾಗಿ ಪರಮೇಶನನ್ನು ಅರ್ಚಿಸಿ ಕರಗಳನ್ನು ಜೋಡಿಸಿ ಪದ್ಮಾಸನದಲ್ಲಿ ಕುಳಿತು ಪಾರ್ವತೀಶನ ಧ್ಯಾನದಲ್ಲಿ ಚಿತ್ತವನ್ನು ಐಕ್ಯಮಾಡಿದನು. ಇತ್ತ ಆ ಗವಳಗಿತ್ತಿಯು ತನ್ನ ಕಾರ್ಯಗಳನ್ನು ನೆರವೇರಿಸಿ ಹೊರಗೆ ಬಂದು ಭೋಜನಾರ್ಥವಾಗಿ ಬಾಲಕ

ನನ್ನು ಎಷ್ಟು ಕೂಗಿದರೂ ಬರಲಿಲ್ಲವಾದಕಾರಣ ಅತ್ತಿತ್ತ ಶೋಧಿಸುತ್ತಾ, ಗುಡಿಸಲಲ್ಲಿ ಕಣ್ಣುಮುಚ್ಚಿಕೊಂಡು ಕುಳಿತ ತನಯನನ್ನು ಕಂಡು ಕೂಗಿದಳು. ಧ್ಯಾನನಿಷ್ಠನಾದ ಪ್ರಯುಕ್ತ ಅವನಿಗೆ ಯಾವ ಶಬ್ದವೂ ಕೇಳಲಿಲ್ಲ. ಆದರೆ ಹೀಗೆ ತಟಸ್ಥನಾಗಿರುವದನ್ನು ಕಂಡು ಗೌಳಿಣಿಯು ಮಹಾ ಕೋಪಾಕ್ರಾಂತಳಾಗಿ ಅವನ ಪೂಜೆಯನ್ನು ಕೆಡಿಸಿ, ಹುಡುಗನನ್ನು ಎಳೆಯುತ್ತಾ ಕರೆದೊಯ್ದಳು. ಆ ಕಾಲದಲ್ಲಿ ಬಾಲಕನು ತನ್ನ ತಾಯಿಯು ಪೂಜೆಕೆಡಿಸಿರುವದನ್ನು ಕಂಡು ದುಃಖಾವಿಷ್ಟನಾಗಿ ರೋಧಿಸುತ್ತಾ ಅಲ್ಲಿಯೇ ಮೂರ್ಛೆಬಂದು ಬಿದ್ದನು. ಮಾತೆಯು ಎಷ್ಟುಪರಿ ಹೇಳಿದರೂ ಅವನು ಕೇಳಲಿಲ್ಲ ಗವಳಗಿತ್ತಿಯು ಮಾತ್ರ ಬೇಸತ್ತು ಬಾಲಕನನ್ನು ಅಲ್ಲಿಯೇ ಬಿಟ್ಟು ಹೋದಳು. ಅಷ್ಟರಲ್ಲಿ ಪರಮೇಶ್ವರನು ಈ ಹುಡುಗನ ಭಾವಕ್ಕೆ ಮೆಚ್ಚಿ ಅದೇ ಸ್ಥಲದಲ್ಲಿ ಒಂದು ರತ್ನಖಚಿತವಾದ ಮಂದಿರವನ್ನೂ, ಅದರಲ್ಲಿ ಒಂದು ಶಿವಲಿಂಗವನ್ನೂ, ಸಕಲ ಪೂಜಾ ಸಾಮಗ್ರಿಗಳನ್ನೂ ನಿರ್ಮಿಸಿದನು. ಬಾಲಕನು ಏನೂ ಇಲ್ಲದ ಸ್ಥಳದಲ್ಲಿ ಅಕಸ್ಮಾತ್ತಾಗಿ ತೇಜಃಪುಂಜವಾದ ದೇವಾಲಯವನ್ನು ನೋಡಿ ಹರ್ಷಿತನಾಗಿ ಒಳಗೆ ಪ್ರವೇಶಿಸಿ ಸಕಲ ಪೂಜಾ-ಸಾಮಗ್ರಿಗಳನ್ನು ಕಂಡು ಶಿವಲಿಂಗವನ್ನು ಪೂಜಿಸಿದನು. ಆವಾಗ ಪಾರ್ವತೀಶನು ಬಾಲಕನೆದುರಿನಲ್ಲಿ ತನ್ನ ಸ್ವರೂಪವನ್ನು ಪ್ರಕಟಮಾಡಿ, ವತ್ಸಾ ! ಏನು ವರ ಬೇಡುತ್ತೀ ಬೇಡೆಂದು ಕೇಳಲಾಗಿ ಬಾಲಕನು ಶಂಕರನಿಗೆ ನಮಸ್ಕರಿಸಿ, ಅನೇಕ ವಿಧದಿಂದ ಸ್ತೋತ್ರಮಾಡಿ, ಭೋ! ಕೈಲಾಸಧಿಪಾ !! ನನಗೇನೂಬೇಡ. ನನ್ನತಾಯಿಯು ನಿನ್ನ ಪೂಜೆಯನ್ನು ಕೆಡಿಸಿರುವಳು. ಆ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳಲು ಪರಮೇಶ್ವರನು 'ತಥಾಸ್ತು' ಎಂದ ಕೂಡಲೆ ಬಾಲಕನು ತನ್ನ ತಾಯಿಯನ್ನು ಕರೆಯಲು ಹೋಗಲಾಗಿ ತನ್ನ ಚಪ್ಪರದ ಮನೆಯು ಮಾಯವಾಗಿ ಅಲ್ಲಿಯೇ ಸುವರ್ಣಮಯ ಮಂದಿರವಾಗಿತ್ತು. ಅದನ್ನು ಕಂಡು ಚಕಿತನಾಗಿ ಒಳಗೆ ಪ್ರವೇಶಿಸಿ ನವರತ್ನ ಖಚಿತ ಪರ್ಯಂಕದಲ್ಲಿ ಪವಡಿಸಿರುವ ಮಾತೆಯನ್ನು ಎಬ್ಬಿಸಿದ ಕೂಡಲೆ ಗವಳಿಗಿತ್ತಿಯು ಎದ್ದು ಈ ಅದ್ಭುತವನ್ನು ನೋಡಿ ಪುತ್ರನನ್ನು ಅಪ್ಪಿ ಅವನ ಮುಖಾಂತರದಿಂದ ಯಾವತ್ತೂ ವೃತ್ತಾಂತವನ್ನು ತಿಳಿದು ದೇವಾಲಯಕ್ಕೆ ಬಂದು ಪರಮೇಶ್ವರನಿಗೆ ನಮಸ್ಕರಿಸಿ, ಅನೇಕ ವಿಧದಿಂದ ಸ್ತೋತ್ರಮಾಡಿ, ಈ ವೃತ್ತಾಂತವನ್ನು ರಾಜಗರುಹಲು ಗಮಿಸಿದಳು. ಚಂದ್ರಸೇನರಾಜನು ಬಾಲಕನ ಕೃತ್ಯವನ್ನು ಕೇಳಿ ಆಶ್ಚರ್ಯಭರಿತನಾಗಿ ತನ್ನ ಮಂಡಳಿಯೊಡನೆ ಆ ದೇವಾಲಯಕ್ಕೆ ಬಾಲಕನ ದರ್ಶನಕ್ಕಾಗಿ ಹೊರಟನು. ಹಾಗೆಯೇ ನಗರದ ನಿವಾಸಿಗಳೆಲ್ಲರೂ ಬಂದರು. ಚಂದ್ರಸೇನ ರಾಜನ ಸಮಸ್ತ ರಿಪುಗಳು ಬಾಲಕನ ಕೃತಿಗೆ ಭೀತಿಗೊಂಡು ಇನ್ನು ನಿನ್ನಮೇಲೆ ಶಸ್ತ್ರಧರಿಸುವುದಿಲ್ಲೆಂದು ಚಂದ್ರಸೇನರಾಜನಿಗೆ ಹೇಳಿಕಳುಹಿ, ಅವನ ಅಪ್ಪಣೆಯ ಮೇರೆಗೆ ಹುಡುಗನಿಂದ ನಿರ್ಮಿತವಾದ ದೇವಾಲಯವನ್ನು ನೋಡಲಿಕ್ಕೆ ಬಂದರು.

ಈ ಪ್ರಕಾರವಾಗಿ ಸರ್ವರೂ ದೇವಾಲಯದಲ್ಲಿ ನೆರೆದು ಬಾಲಕನನ್ನು

ಸ್ತೋತ್ರಮಾಡುವ ಕಾಲದಲ್ಲಿ ಅಂಜನಾದೇವಿಯ ಮಗನಾದ ಮಾರುತಿಯು ಸಮಸ್ತ ಜನಗಳ ಮಧ್ಯಭಾಗದಲ್ಲಿ ಪ್ರತ್ಯಕ್ಷನಾದನು. ಸಮಸ್ತ ಪ್ರಜೆಗಳು ಸಕಲ ರಾಜರೂ ಪವನನಂದನನ ತೇಜವನ್ನು ನೋಡಲಾರದೆ ಕಣ್ಣುಮುಚ್ಚಿಕೊಂಡು ಮಾರುತಿಗೆ ಪ್ರತ್ಯುತ್ಥಾನಮಾಡಿದರು. ಆವಾಗ ಮಾರುತಿಯು ಗಂಭೀರಧ್ವನಿಯಿಂದ ಸಕಲ ಜನರಿಗೆ ಇಂತೆಂದನು. " ಎಲೈ ನರರೇ! ಶಿವಪೂಜಾ ಮಹಾತ್ಮೆಯನ್ನು ನೋಡಿದಿರಾ ! ಈ ಬಾಲಕನು ಸೋಮವಾರ ಪ್ರದೋಷಕಾಲದಲ್ಲಿ ಅನನ್ಯಭಾವದಿಂದ ಪರಮೇಶ್ವರನನ್ನು ಪೂಜಿಸಿದ ಕಾರಣ ಇಂಥ ಐಶ್ವರ್ಯವನ್ನು ಪಡೆದಿದ್ದಲ್ಲದೆ ಶಿವಕಿಂಕರನಾದನು. ಅಲ್ಲದೆ ಇವನ ವಂಶದ ಎಂಟನೆಯವನಾದ ನಂದಗೋಪನ ಉದರದಲ್ಲಿ ಶ್ರೀಮನ್ನಾರಾಯಣನೇ ಅವತರಿಸುವನು. " ಎಂದು ಹೇಳಿ ಬಾಲಕನ ಮಸ್ತಕದಮೇಲೆ ಅಭಯಹಸ್ತವನ್ನು ಇಟ್ಟು ಶಿವಪಂಚಾಕ್ಷರಿ ಮಹಾಮಂತ್ರವನ್ನು ಉಪದೇಶಿಸಿ ಅಂತರ್ಧಾನನಾದನು. ಚಂದ್ರಸೇನರಾಜನು ಬಂದಜನರಿಗೆಲ್ಲರಿಗೂ ಉಡಿಗೆತೊಡಿಗೆಗಳನ್ನಿತ್ತು ಕಳುಹಿದನು. ನಂತರ ಮಾರುತಿಯಿಂದ ಶ್ರೀಕರನೆಂಬ ನಾಮವನ್ನು ಪಡೆದು ಗವಳಗಿತ್ತಿಯ ಪುತ್ರನು. ಇಹಲೋಕದಲ್ಲಿ ಕೆಲವು ಕಾಲ ಸೌಖ್ಯವನ್ನು ಭೋಗಿಸಿ ಮುಂದೆ ಶಿವಲೋಕವನ್ನು ಕುರಿತು ಗಮನಮಾಡಿದನು.

ನಾಲ್ಕನೇ ಅಧ್ಯಾಯ ಸಂಪೂರ್ಣವಾದುದು.

## ಐದನೇ ಅಧ್ಯಾಯ ಪ್ರಾರಂಭ.

# ಧರ್ಮ ಗುಪ್ತನ ಕಥೆ.

ವಿಭವಗಳಿಂದ ವಿಸ್ತಾರವಾದ ವಿದರ್ಭದೇಶದಲ್ಲಿ ಸತ್ಯರಥನೆಂಬ ರಾಜನು ಮಹಾಶೌರ್ಯದಿಂದಲೂ, ಧೈರ್ಯದಿಂದಲೂ, ಸತ್ಯದಿಂದಲೂ ರಾಜ್ಯಪಾಲನಮಾಡುತ್ತಿದ್ದನು. ಇವನಿಗೆ ಶಿವಪೂಜೆಯಲ್ಲಿ ಮಾತ್ರ ಸ್ವಲ್ಪವಾದರೂ ಅಪೇಕ್ಷೆಇದ್ದಿಲ್ಲ. ಕೆಲವು ಕಾಲವಾದಬಳಿಕ ಶಾಲ್ವ-ದೇಶಾಧಿಪನು ಪರರಾಯರ ಸಹಾಯದಿಂದ ಅನೇಕ ಸೇನೆಯೊಂದಿಗೆ ಬಂದು ವಿದರ್ಭಪುರಿಗೆ ಮುತ್ತಿಗೆ ಹಾಕಿದರು. ಸತ್ಯರಥನಾದರೂ ಹಿಂಜರಿಯದೆ ತನ್ನಚತುರಂಗಬಲವನ್ನು ಸಿದ್ಧಪಡಿಸಿಕೊಂಡು ಶತ್ರುಗಳಿಗೆ ಎದುರಾಗಿ ಬಂದು ಯುದ್ಧಕ್ಕೆ ಸನ್ನದ್ಧನಾದನು. ಏಳುದಿನಗಳ ವರೆಗೆ ಕಡು ಕಾಳಗವಾಯಿತು. ಎತ್ತನೋಡಿದತ್ತ ರಕ್ತದ ಕಾಲುವೆಗಳೇ ಹರಿಯಹತ್ತಿದವು. ವೀರರ ಶಿರಗಳು ಶಸ್ತ್ರಪ್ರಹಾರದಿಂದ ಮೇಲಕ್ಕೆಹಾರಿ ತಾರಿಕೆಗಳಂತೆ ಶೋಭಿಸಹತ್ತಿದವು. ಕತ್ತರಿಸಿ ಬಿದ್ದ ಭುಜಗಳನ್ನು ನೋಡಿ ಬೇತಾಳಗಳು ಮಹಾದಾನಂದದಿಂದ ನಗುತ್ತಿದ್ದವು. ಇಂಥ ಸಮರದಲ್ಲಿ ಸತ್ಯರಥನು ಧೈರ್ಯದಿಂ

ಧ ಶತ್ರುಗಳ ಸಂಗಡ ಹೋರಾಡಿ ಏಳನೇದಿನದಲ್ಲಿ ಸಮರಭೂಮಿಯಲ್ಲಿ ದೇಹವನ್ನು ಬಿಟ್ಟನು. ಬಳಿಕ ವೈರಿಜನರು ಜಯಭೇರಿಯನ್ನು ಬಾರಿಸುತ್ತ ವಿದರ್ಭಪುರಿಯನ್ನು ಪ್ರವೇಶಿಸಿ ಲೂಟಿಗಳನ್ನೂ, ಕೊಲೆಗಳನ್ನು ಮಾಡಹತ್ತಿದರು. ಈ ವರ್ತಮಾನವನ್ನು ಸತ್ಯರಥನ ಪತ್ನಿಯಾದ ಇಂದುಮತಿಯು ಕೇಳಿ ತಾನು ಶತ್ರುಗಳ ಪಾಲಾಗಬಾರದೆಂದು ಎಣಿಸಿ ಪೂರ್ಣ ಗರ್ಭಿಣಿಯಿದ್ದರೂ ಸಹ ಅರಣ್ಯವನ್ನು ಪ್ರವೇಶಿಸಿದಳು. ಘೋರವಾದ ಕಾನನದಲ್ಲಿ ಕಲ್ಲು-ಮುಳ್ಳುಗಳನ್ನು ತುಳಿದದ್ದರಿಂದ ಪಾದಗಳಿಂದ ರಕ್ತಪ್ರವಾಹ ನಡೆಯಿತು. ಬಿಸಿಲಿನ ತಾಪದಿಂದ ಬಾಯಾರಿ ಬಳಲಿ, "ಹಾ ವಿಧಿಯೇ! ನನ್ನನ್ನು ಕಾಡುಪಾಲು ಮಾಡಿದೆಯಾ!" ಎಂದು ರೋಧಿಸುತ್ತಿರಲು, ಪ್ರಸವವೇದನೆ ವಿಶೇಷವಾದ್ದರಿಂದ ಹೆಚ್ಚು ಹೆಚ್ಚು ಸಂಕಟಪಡುತ್ತಾ ಮೃದುಶರೀರಿಯಾದ ಇಂದುಮತಿಯು ಒಂದು ವೃಕ್ಷದ ನೆರಳಿನಲ್ಲಿ ಕುಳಿತು ಪುತ್ರರತ್ನನನ್ನು ಪ್ರಸೂತಳಾದಳು. ಆಮೇಲೆ ದಾಹದಿಂದ ಬಹಳೇ ಪೀಡಿತಳಾಗಿ ಆ ಶಿಶುವನ್ನು ಅಲ್ಲಿಯೇ ಮಲಗಿಸಿ ನೀರು ಕುಡಿಯಲಿಕ್ಕೆ ಜಲವನ್ನು ಹುಡುಕುತ್ತ ನಡೆದಳು ಹೀಗೆ ಕಾನನದಲ್ಲಿ ತಿರುಗುತ್ತಿರುವಾಗ ಸುದೈವದಿಂದ ಒಂದು ಸರೋವರವು ಆಕೆಗೆ ಕಾಣಿಸಿತು. ಇಂದುಮತಿಯು ಅದರಲ್ಲಿಳಿದು ನೀರು ಕುಡಿಯುವಷ್ಟರಲ್ಲಿಯೇ ಒಂದು ಮೊಸಳೆಯು ಬಂದು ಇವಳ ಕಾಲನ್ನು ಹಿಡಿದು ಜಗ್ಗಿ ಭಕ್ಷಣಮಾಡಿಬಿಟ್ಟಿತು. ಅತ್ತ ಬಾಲಕನು ಓರ್ವನೇ ಅಗತಿಕ್ಕಿಲ್ಲದೆ ಅಳುತ್ತಾ ಪ್ರಾಕ್ಕರ್ಮ ಪ್ರಭಾವದಿಂದ ಕಷ್ಟಪಡಹತ್ತಿದನು. ಕೆಲವು ಕಾಲದಮೇಲೆ ವಿಧವೆಯಾದ ಉಮೆಯೆಂಬ ಸ್ತ್ರೀಯು ತನ್ನ ಒಂದು ವರ್ಷದ ಬಾಲಕನೊಂದಿಗೆ ಉದರಂಭರಣಾರ್ಥವಾಗಿ ಪರಗ್ರಾಮಕ್ಕೆ ಹೋಗಬೇಕೆಂದು ಅದೇ ಮಾರ್ಗದಿಂದ ಬರಹತ್ತಿ ಬಾಲಕನಿದ್ದ ಸ್ಥಾನಕ್ಕೆ ಬಂದು ಅವನನ್ನು ನೋಡಿ ಕರುಣಾಪೂರ್ಣಳಾಗಿ, ಆಹಾ! ಈ ಬಾಲಕನು ಯಾರಿರಬಹುದು!! ಯಾವ ವಂಶದವನಾದಾನು? ಇವನ ಜಾತಿ ಯಾವದಿದ್ದೀತು? ಇವನನ್ನು ಮುಟ್ಟಿದರೆ ಏನಾಗುವದೋ ಏನೋ! ಎಂದು, ನಾನಾತರದ ತರ್ಕಗಳನ್ನು ಮಾಡಲಾರಂಭಿಸಿದಳು.

ಆ ಕಾಲದಲ್ಲಿ ಭಕ್ತರಕ್ಷಕನಾದ ಗಿರಿಜಾವಲ್ಲಭನು ಯತಿಯ ವೇಷವನ್ನು ಧರಿಸಿ ಅವಳ ಹತ್ತರಬಂದು, "ಅಮ್ಮಾ! ಯಾಕೆ ವಿಚಾರಿಸುವಿ? ಈ ಮಗುವನ್ನು ತೆಗೆದುಕೋ!! ಇವನಿಂದ ನಿನಗೆ ಸುಖವಾಗುವದು. ಇವನ ವಂಶಗೋತ್ರಗಳ ಬಗ್ಗೆ ಸಂಶಯಪಡಬೇಡ. ಇವನು ಓರ್ವ ರಾಜಾಧಿರಾಜನ ತನಯನು; ದುರ್ದೈವದ ಮಹಾತ್ಮೆಯಿಂದ ಈ ಅವಸ್ಥೆಯಲ್ಲಿರುವನು. ಇವನನ್ನು ಪುತ್ರನಂತೆ ಭಾವಿಸಿ ಸಂರಕ್ಷಿಸು," ಎಂದು ಹೇಳಿ ಅದೃಶ್ಯನಾದನು. ಉಮೆಯು ಪರಮಾನಂದದಿಂದ ಆ ರಾಜಪುತ್ರನಿಗೆ ಧರ್ಮಗುಪ್ತನೆಂದು ಹೆಸರಿಟ್ಟು ಬಗಲಲ್ಲಿ ಇರಿಸಿಕೊಂಡು ತನ್ನ ಮಗನಾದ ಶುಚಿವ್ರತನನ್ನು ಕರೆದುಕೊಂಡು ಮುಂದಕ್ಕೆ ಸಾಗಿದಳು. ಮಾರ್ಗಸ್ಥರು ಈ ಬಾಲಕರನ್ನು ನೋಡಿ ಯಾರೆಂದು ಕೇಳಿದರೆ,

ಉಮೆಯು ತನ್ನ ಪುತ್ರರೆಂದು ಹೇಳುತ್ತಾ, ಏಕಚಕ್ರನಗರಿಗೆ ತಲ್ಪಿದಳು. ಅಲ್ಲಿ ಒಂದು ಶಿವಾಲಯದಲ್ಲಿ ಯಾವತ್ತು ಋಷಿಗಳು ಕೂಡಿದ್ದನ್ನು ಕಂಡು ಉಮೆಯು ತನ್ನ ಬಾಲಕರೊಂದಿಗೆ ಸಾಷ್ಟಾಂಗಮಾಡಿ ನಿಂತಿರಲಾಗಿ, ಆ ಋಷಿಗಳ ಮಧ್ಯದಲ್ಲಿ ಶಾಂಡಿಲ್ಯ ಮಹಾ ಮುನಿಯು ಈ ರಾಜ ಪುತ್ರನನ್ನು ನೋಡಿ,"ಅಹಾ! ಬ್ರಹ್ಮಲಿಪಿಯನ್ನು ತಪ್ಪಿಸುವದು ಯಾರಿಗೆ ಆದೀತು !! ಈ ಬಾಲಕನು ರಾಜ ಪುತ್ರನಿದ್ದು ದರಿದ್ರನಂತೆ ಮನೆ ಮನೆಗೆ ಹೋಗಿ ಬೇಡುತ್ತಿರುವನು." ಎಂದು ನುಡಿಯಲಾ ಉಮೆಯು ಶಾಂಡಿಲ್ಯ ಋಷಿಗೆ ನಮಸ್ಕರಿಸಿ, "ತಪೋನಿಷ್ಠರೇ! ತಾವು ತ್ರಿಕಾಲಜ್ಞರಿರುವಿರಿ. ಕಾರಣ ಈ ಬಾಲಕನು ಯಾರು? ಇವನ ತಂದೆ ತಾಯಿಗಳು ಜೀವದಿಂದ ಇರುವರೋ ಹೇಗೆ? ಇವನು ಇಂಥ ದೀನಾವಸ್ಥೆಯನ್ನು ಪಡೆಯಲಿಕ್ಕೆ ಕಾರಣವೇನು?" ಎಂದು ಬೆಸಗೊಳ್ಳಲಾಗಿ ಮುನಿಪನಿಂತೆಂದನು.

"ಸುದತಿಯೇ! ಇವನ ತಂದೆಯು ಪೂರ್ವದಲ್ಲಿ ರಾಜನಾಗಿದ್ದನು. ಅವನು ಒಂದಾನೊಂದು ದಿವಸ ಶಿವಪೂಜಾ ಮಾಡುವ ಕಾಲದಲ್ಲಿ ಪರರಾಯರು ಬಂದು ಮುತ್ತಿಗೆ ಹಾಕಲು ಇವನ ಮಂತ್ರಿಯು ಸಮರಕ್ಕೆಹೋಗಿ ಅವರನ್ನು ಜಯಿಸಿ ಶತ್ರುಗಳನ್ನು ಇವನ ಮುಂದೆ ತಂದು ನಿಲ್ಲಿಸಲಾಗಿ ಈ ರಾಜನು ಶಿವಪೂಜೆಯನ್ನು ಅಷ್ಟಕ್ಕೆ ನಿಲ್ಲಿಸಿ, ಮಹಾ ಕೋಪದಿಂದ ವೈರಿಗಳನ್ನು ವಧಿಸೆಂದೂ, ಬಂಧಿಸೆಂದೂ ಪೇಳುತ್ತಾ, ಶಯ್ಯಾಮಂದಿರಕ್ಕೆ ಹೋಗಿ ಮಲಗಿದನು. ಆ ದೋಷದಿಂದ ಈ ಜನ್ಮದಲ್ಲಿ ಅರ್ಧಾಯುಷಿಯಾಗಿ ಮೃತಪಟ್ಟನು. ಈ ಬಾಲಕನ ತಾಯಿಯಾದ ಇಂದುಮತಿಯು ಹಿಂದಿನ ಜನ್ಮದಲ್ಲಿ ತನ್ನ ಸವತಿಯನ್ನು ಮತ್ಸರದಿಂದ ಕೊಂದಳು. ಅವಳು (ಸವತಿ) ಮೊಸಳೆಯಾಗಿ ಸರೋವರದಲ್ಲಿರುತ್ತಿದ್ದಳು. ಒಮ್ಮೆ ಇಂದುಮತಿಯು ಜಲಪ್ರಾಶನಕ್ಕೆ ಅದೇ ಸರಸಿಗೆ ಹೋದಕಾಲದಲ್ಲಿ ಆ ಮೊಸಳೆಯು ಪೂರ್ವದ ದ್ವೇಷದಿಂದ ಇವಳನ್ನು ಹಿಡಿದು ಭಕ್ಷಣ ಮಾಡಿತು. ಈ ಧರ್ಮಗುಪ್ತನು ಪೂರ್ವಜನ್ಮದಲ್ಲಿ ಶಿವಪೂಜೆ ಮಾಡದ್ದರಿಂದ ಈ ರೀತಿ ಅನಾಥನಾಗಿರುವನು," ಎಂದು ಹೇಳಲಾಗಿ ಉಮೆಯು, "ಸ್ವಾಮಿನ್! ಇವರ ವೃತ್ತಾಂತವನ್ನು ಕೇಳಿದೆನು. ಆದರೆ ನನ್ನಮಗನಾದ ಶುಚಿವ್ರತನು ಇಷ್ಟು ದರಿದ್ರನಾಗಲಿಕ್ಕೆ ಕಾರಣವೇನು?" ಎಂದು ಕೇಳಲಾಗಿ ಶಾಂಡಿಲ್ಯನು, "ಮಾನಿನಿಯೇ! ಪೂರ್ವಜನ್ಮದಲ್ಲಿ ನಿನ್ನ ಮಗನು ಅನೇಕ ಕೆಟ್ಟ ದಾನಗಳನ್ನು ಸ್ವೀಕರಿಸಿದನು. ತಾನು ಒಂದಾದರೂ ದಾನಧರ್ಮಗಳನ್ನು ಮಾಡಲಿಲ್ಲ. ಶಂಕರನ ಪೂಜೆಯನ್ನೂ ಮಾಡಲಿಲ್ಲ. ಆದ್ದರಿಂದ ದಾರಿದ್ರ್ಯವನ್ನು ಭೋಗಿಸುತ್ತಿರುವನು."ಎಂದು ಹೇಳಲಾಗಿ ಉಮೆಯು ಇಬ್ಬರು ಬಾಲಕರನ್ನು ಮುನಿಯ ಪಾದಗಳ ಮೇಲೆ ಕೆಡವಿ, ಇವರನ್ನು ಉದ್ಧರಿಸಬೇಕೆಂದು ಪ್ರಾರ್ಥಿಸಲು, ಶಾಂಡಿಲ್ಯ ಋಷಿಯು ಸಂತೋಷದಿಂದ ತನ್ನ ಅಭಯಹಸ್ತವನ್ನು ಇಬ್ಬರ ಶಿರಸ್ಸಿನಲ್ಲಿಯೂ ಇಟ್ಟು ಶಿವಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿದನು. ಬಾಲಕರು ಮುನೀಶ್ವರನ ವಾಕ್ಯವನ್ನು ಚೆನ್ನಾಗಿ ಧ್ಯಾನದಲ್ಲಿ

ಟ್ಟರು. ನಂತರ ಉಮೆಯು ಆ ಬಾಲಕರೊಂದಿಗೆ ಶಾಂಡಿಲ್ಯ ಮುನಿಗೆ ನಮಸ್ಕರಿಸಿ ಅವನ ಅನುಜ್ಞೆಯಿಂದ ಅದೇ ಏಕಚಕ್ರನಗರದಲ್ಲಿ ವಾಸಮಾಡಿದಳು. ಕೆಲವು ದಿನಗಳು ಹೋಗಲು ಧರ್ಮಗುಪ್ತ-ಶುಚಿವ್ರತರು ಕೂಡಿ ನದಿಗೆ ಸ್ನಾನಾರ್ಥವಾಗಿ ಹೋಗುವಕಾಲದಲ್ಲಿ ಶುಚಿವ್ರತನಿಗೆ ದ್ರವ್ಯತುಂಬಿದ ಹೂಜಿಯು ಮಧ್ಯ-ಮಾರ್ಗ ದಲ್ಲಿ ಸಿಕ್ಕಿತು. ಅವನು ಅದನ್ನು ತಂದು ಉಮೆಯ ಕೈಯ್ಯಲ್ಲಿ ಕೊಡಲು, ಅವಳು ಈರ್ವರಿಗೂ ಸಮವಾಗಿ ಹಂಚಿದಳು. ಧರ್ಮಗುಪ್ತನು ಅದನ್ನು ಸ್ವೀಕರಿಸದೆ, ಅಮ್ಮಾ! 'ಶಂಕರನ ದಯವಿದ್ದರೆ ಜಗತ್ತೇ ನಮ್ಮದಿರುವದು' ಎಂದು ಹೇಳಿ, ತನ್ನಪಾಲಿಗೆ ಬಂದಿದ್ದ ದ್ರವ್ಯವನ್ನು ತಿರುಗಿ ಶುಚಿವ್ರತನಿಗೇ ಕೊಟ್ಟನು.

ಮತ್ತೊಂದು ದಿನ ಇಬ್ಬರೂ ಆಟಗಳನ್ನಾಡುತ್ತಾ ಒಂದು ಅರಣ್ಯವನ್ನು ಪ್ರವೇಶಿಸಿದರು. ಅಲ್ಲಿ ಅನೇಕ ಮೃಗಗಳನ್ನು ನೋಡುತ್ತ ಅತ್ತಿತ್ತ ಸಂಚರಿಸಿ ಎದುರಿಗೆ ತೋರುವ ನಂದನ-ವನವನ್ನು ನಿಂದಿಸುವ ಮನೋಹರವಾದ ಉದ್ಯಾನ ವನಕ್ಕೆ ಬಂದು ಅತಿ ತಂಪಾದ ವೃಕ್ಷದ ನೆರಳಿನಲ್ಲಿ ಕುಳಿತರು. ಅದೇ ವನದಲ್ಲಿ ಕೋದ್ರವೀಣನೆಂಬ ಗಂಧರ್ವ-ಪುತ್ರಿಯಾದ ಅಂಶುಮತಿ ಎಂಬ ಜಗತ್ಸುಂದ ರಿಯು ಕ್ರೀಡಾರ್ಥವಾಗಿ ತನ್ನ ಸಖಿಯರೊಂದಿಗೆ ಬಂದಿದ್ದಳು. ವೃಕ್ಷದ ಬುಡದಲ್ಲಿ ಕುಳಿತ ಧರ್ಮಗುಪ್ತನು ಆ ತರುಣೀಮಣಿಯನ್ನು ಕಂಡು ಕಾಮಬಾಧೆಗೊಳಪ ಟ್ಟನು. ಇದನ್ನು ನೋಡಿ ಶುಚಿವ್ರತನು ಎಷ್ಟು ತಿಳಿಹೇಳಿದರೂ ಕೇಳದೆ ಅವ ನನ್ನು ಅಲ್ಲಿಯೇ ಬಿಟ್ಟು ಧರ್ಮಗುಪ್ತನು ಅವಳೆಡೆಗೆ ಬರಹತ್ತಿದನು. ಎದುರು ಬರುವ ರಾಜತನಯನನ್ನು ನೋಡಿ ಅಂಶುಮತಿಯು ಕಂದರ್ಪನ ವಶಳಾಗಿ ಯಾವ ಪದಾರ್ಥಗಳಲ್ಲಿಯೂ ಮನವನ್ನಿಡದೆ, ತನ್ನ ಸಖಿಯನ್ನು ಪುಷ್ಪ ಕೊಯ್ಯುವ ನೆವದಿಂದ ಮತ್ತೊಂದು ಸ್ಥಳಕ್ಕೆ ಕಳುಹಿಸಿ, ಇವನನ್ನೇ ದಿಟ್ಟಿಸಿ ನೋಡುತ್ತಿದ್ದಳು. ಧರ್ಮಗುಪ್ತನು ಇವಳ ಮಂದಹಾಸವನ್ನೂ, ಒಯ್ಯಾರ ವನ್ನೂ, ಬಂಗಾರದ-ಕಲಶಗಳೋಪಾದಿಯಲ್ಲಿದ್ದ ಕುಚಗಳ ಭಾರದಿಂದ ಬಳಕುವ ಸೂಕ್ಷ್ಮಕಟಿಯನ್ನೂ, ಸಂಪಿಗೆದನೆಯಂತಿರುವ ನಾಶಿಕವನ್ನೂ, ಪೌರ್ಣಿಮಾ ಚಂದ್ರನನ್ನು ಧಿಃಕರಿಸುವ ಸುಂದರ ವದನವನ್ನೂ, ಹವಳದಂತೆ ಹೊಳೆಯುವ ಕೆಂದುಟಿಯನ್ನೂ, ಪ್ರತಿಬಿಂಬವನ್ನು ಗ್ರಹಿಸುವ ಕಪೋಲವನ್ನೂ, ಹರಣಿಗಳನ್ನು ಸೋಲಿಸುವ ಚಂಚಲನೇತ್ರಗಳನ್ನೂ, ಮನ್ಮಥನ ಧನುಷ್ಯಾಕಾರವಾಗಿರ್ಪ ಹುಬ್ಬುಗಳನ್ನೂ ಕಂಡು ಭ್ರಾಂತಿಗೆಟ್ಟು ನಿಲ್ಲುವ ಕಾಲದಲ್ಲಿ ಅಂಶುಮತಿಯು ತನ್ನ ಕಂಠದಲ್ಲಿದ್ದ ಮೌಕ್ತಿಕ ಹಾರವನ್ನು ತೆಗೆದು ಮುಂದಮುಂದವಾಗಿ ಅಡಿಗಳನ್ನಿ ಕ್ಕುತ್ತ ಹತ್ತರ ಬಂದು ಇವನ ಕಂಠದಲ್ಲಿ ಹಾಕಿ "ತರುಣನೇ! ನೀನೇ ನನ್ನ ಪತಿ" ಎಂದು ಹೇಳಲಾಗಿ ಧರ್ಮಗುಪ್ತನು, "ಸುದತಿಯೇ! ತಂದೆ-ತಾಯಿ ಗಳಿಲ್ಲದೆ ಅನಾಥನಾಗಿ, ರಾಜಭ್ರಷ್ಟನಾಗಿ ದರಿದ್ರನಾಗಿ ತಿರುಗುವ ನನ್ನೊಡನೆ ಹೇಗೆ ವಿವಾಹ ಮಾಡಿಕೊಳ್ಳುವಿ?" ಎಂದು ಕೇಳಲಾಗಿ ಅಂಶುಮತಿಯು,

" ಪ್ರಾಣೇಶ್ವರನೇ ! ನೀನು ದರಿದ್ರನಾಗಿರಲಿ, ರಾಜಭ್ರಷ್ಟನಾಗಿರಲಿ; ಹೇಗಿದ್ದರೂ ನಿನ್ನ ಹಸ್ತವನ್ನು ಹಿಡಿದೆ. ಇದು ಸತ್ಯವಚನವು. ಮನದಲ್ಲಿ ಸ್ವಲ್ಪಾದರೂ ಚಿಂತಿಸಬೇಡ. ನೀನು ಇನ್ನು ಮೂರನೇ ದಿನ ಇಲ್ಲಿಗೆ ಬಾ ! ನಾನೂ ನನ್ನ ತಂದೆಗೆ ತಿಳುಹಿ ಸಕಲ ಸನ್ನಾಹದೊಡನೆ ಇಲ್ಲಿಗೆ ಬರುವೆನು ಆ ಕಾಲದಲ್ಲಿ ನಿನ್ನೊಡನೆ ವಿವಾಹ ಮಾಡಿಕೊಳ್ಳುವೆನು ನೀನು ಗಮನ ಮಾಡು " ಎಂದು ಹೇಳಿ ಅಂಶುಮತಿಯು ಸಖಿಯರೊಂದಿಗೆ ಸ್ವರ್ಗಕ್ಕೆ ಹೋದಳು.

ಧರ್ಮಗುಪ್ತನಾದರೂ ಈ ವೃತ್ತಾಂತವನ್ನು ತಾಯಿಗೆ ತಿಳುಹಲಾಗಿ ಅವಳು ಪರಮಾನಂದ-ಸಾಗರದಲ್ಲಿ ಮುಳುಗಿದಳು ಅತ್ತ ಅಂಶುಮತಿಯಾದರೂ ವನದಲ್ಲಿ ನಡೆದ ವರ್ತಮಾನವನ್ನು ಕ್ರೋಧವೀಣನಿಗೆ ತಿಳುಹಲಾಗಿ, ಗಂಧರ್ವನು ಆಹಾ ! ಹಿಂದಕ್ಕೆ ನಾನು ಕೈಲಾಸಕ್ಕೆ ಹೋಗಿ ಅಂಶುಮತಿಯನ್ನು ಯಾರಿಗೆ ಕೊಡಬೇಕೆಂದು ಶಂಕರನನ್ನು ವಿಚಾರಿಸಲಾಗಿ ಪರಮೇಶ್ವರನು ನನ್ನ ಭಕ್ತನಾದ ಧರ್ಮಗುಪ್ತನಿಗೆ ಕೊಡೆಂದು ಹೇಳಿದ್ದನು. ಆ ಕಾಲವು ಈಗ ಸಮೀಪಿಸಿತೆಂದು ಮಗಳ ಮಾತನ್ನು ಮನ್ನಿಸಿ ಸಕಲ ವಿಭವದೊಡನೆ ಮೂರನೇ ದಿನದಲ್ಲಿ ಆ ಅರಣ್ಯಕ್ಕೆ ಬಂದನು. ಇತ್ತ ಧರ್ಮಗುಪ್ತನು ಶುಚಿವ್ರತನೊಡನೆ ಉಮೆಯ-ಆಜ್ಞೆ ಪಡೆದು ಆ ಅರಣ್ಯವನ್ನು ಪ್ರವೇಶಿಸಿದನು. ಗಂಧರ್ವನು ಅಳಿಯನನ್ನು ನೋಡಿ ಬಹಳ ಸಂತೋಷಗೊಂಡು ಯೋಗ್ಯ ಸನ್ಮಾನಮಾಡಿ ಕುಳ್ಳಿರಿಸಿ ಅಲ್ಲಿಗೆ ಉಮೆಯನ್ನು ಕರಿಸಿ, ಸುಮುಹೂರ್ತದಲ್ಲಿ ಅಂಶುಮತಿಯನ್ನು ಧರ್ಮಗುಪ್ತನಿಗೆ ಕೊಟ್ಟು ಅನೇಕ ವಸ್ತ್ರಾಲಂಕಾರಗಳನ್ನೂ, ಚತುರಂಗ ಬಲವನ್ನೂ, ದಾಸ ದಾಸಿಯರನ್ನೂ, ಉಡುಗರೆಯಾಗಿ ಕೊಟ್ಟನು ಧರ್ಮಗುಪ್ತನು ಅಂಶುಮತಿಯನ್ನು ಕರೆದುಕೊಂಡು ಮಾವನಿಂದ ಅಪ್ಪಣೆಪಡೆದು ಉಮಾ ಮತ್ತು ಶುಚಿವ್ರತರನ್ನು ಕರೆದುಕೊಂಡು ಚತುರಂಗ ಬಲದೊಡನೆ ತನ್ನ ಮೊದಲನೇ ಪಟ್ಟಣವಾದ ವಿದರ್ಭದೇಶಕ್ಕೆ ತಲ್ಪಿ ಶತ್ರುವಾದ ದುರ್ಮರ್ಷಣ ರಾಜನನ್ನು ಸಮರದಲ್ಲಿ ಗೆದ್ದು ಅವನನ್ನು ಬಂಧನದಲ್ಲಿರಿಸಿ, ಸುಮುಹೂರ್ತದಲ್ಲಿ ಸಿಂಹಾಸನಾರೂಢನಾದನು. ಆಮೇಲೆ ಸಕಲ ಪ್ರಜೆಗಳೂ, ಮಾಂಡಲೀಕರೂ ಪರಮಾನಂದದಿಂದ ಧರ್ಮಗುಪ್ತನಿಗೆ ಕಾಣಿಕೆಯನ್ನು ಕೊಟ್ಟು ಮಹೋತ್ಸವವನ್ನು ನಡೆಯಿಸಿದರು. ಧರ್ಮಗುಪ್ತನು ಶುಚಿವ್ರತನಿಗೆ ಮಂತ್ರಿಪಟ್ಟವನ್ನು ಕಟ್ಟಿ ಗುರುಗಳಾದ ಶಾಂಡಿಲ್ಯ ಋಷೀಶ್ವರನನ್ನು ಕರೆಯಿಸಿ ಅವರಿಗೆ ವಿಶೇಷ ಸನ್ಮಾನ ಮಾಡಿ ಧನಕನಕಗಳನ್ನು ಗುರುದಕ್ಷಿಣೆಯಾಗಿ ಕೊಟ್ಟು ಹತ್ತುಸಹಸ್ರ ವರ್ಷ ಧರ್ಮದಿಂದ ರಾಜ್ಯವನ್ನು ಪಾಲಿಸಿ, ಅಂತ್ಯದಲ್ಲಿ ತನ್ನ ಮಗನಾದ ಸುದತ್ತನಿಗೆ ಪಟ್ಟವನ್ನು ಕಟ್ಟಿ, ಉಮಾ, ಅಂಶುಮತಿ, ಶುಚಿವ್ರತ ಇವರಿಂದ ಯುಕ್ತನಾಗಿ ಕೈಲಾಸಕ್ಕೆ ತೆರಳಿದನು.

ಐದನೇ ಅಧ್ಯಾಯ ಸಂಪೂರ್ಣವಾದುದು.

# ಆರನೆಯ ಅಧ್ಯಾಯ.

## ಸೀಮಂತಿನಿಯ ಕಥೆ.



ವಿಂಧ್ಯ-ಹಿಮಾಲಯಗಳ ಮಧ್ಯದಲ್ಲಿದ್ದ ಆರ್ಯಾವರ್ತ ಭೂಮಿಯಲ್ಲಿ ಚಿತ್ರವರ್ಮನೆಂಬ ರಾಜನು ಆಳುತ್ತಿದ್ದನು. ಇವನು ದಾತೃತ್ವದಲ್ಲಿ ಕರ್ಣನಂತೆಯೂ. ಬಲದಲ್ಲಿ ಇಂದ್ರನಂತೆಯೂ, ಶಾಂತತೆಯಲ್ಲಿ ಚಂದ್ರನಂತೆಯೂ, ಜಾಣ್ಮೆಯಲ್ಲಿ ಬೃಹಸ್ಪತಿಯಂತೆಯೂ, ವಿಚಾರದಲ್ಲಿ ವಿದುರನಂತೆಯೂ ಇದ್ದು ಸರ್ವ ಪ್ರಜರನ್ನು ಮಕ್ಕಳಂತೆ ಜೋಕೆಮಾಡುತ್ತಿದ್ದನು ಇವನಿಗೆ ಅನೇಕ ಮಂದಿ ಪುತ್ರರು ಇದ್ದಾಗ್ಯಾದರೂ ಕನ್ನೆಯಿಲ್ಲವೆಂಬ ಚಿಂತೆಯಿಂದ ಶಂಕರನನ್ನು ಸೇವಿಸಿ, ಕೆಲವು ದಿನಗಳಾದಮೇಲೆ ಒಬ್ಬ ಪುತ್ರಿಯನ್ನು ಪಡೆದನು. ಪುತ್ರಿಯು ಜನಿಸುವ ಕಾಲದಲ್ಲಿ ಅನೇಕ ಜೋತಿರ್ವೇತ್ತರು ನೆರೆದಿದ್ದರು ಅವರೆಲ್ಲರೂ ಕಾಲವನ್ನು ಸಾಧಿಸಿ ಚಿತ್ರವರ್ಮನಿಗೆ, "ರಾಜನ್! ನಿನ್ನ ಮಗಳು ರಾಜಾಧಿರಾಜನ ಪತ್ನಿಯಾಗಿ ಹತ್ತುಸಹಸ್ರ ವರುಷ ಪತಿಯಿಂದ ಯುಕ್ತಳಾಗುವಳು" ಎಂದು ಹೇಳಲಾಗಿ ರಾಜನು ಪರಮಾನಂದ ಪುಲಕಿತ ಗಾತ್ರನಾಗಿ ಸರ್ವಯಾಚಕರಿಗೂ ಅನರ್ಘ್ಯ ರತ್ನ-ಭೂಷಣಾಂಬರಗಳನ್ನು ಕೊಟ್ಟು ಅವರಿಗೆ ಅಪ್ಪಣೆಯಿತ್ತನು. ಎಲ್ಲರೂ ಹೋಗಲಾಗಿ ಅದರಲ್ಲಿದ್ದ ಓರ್ವ ವಿದ್ವಾಂಸನು ರಾಜನ ಹತ್ತರಬಂದು, "ಭೂಪತಿಯೇ! ಸರ್ವಕಾಲಜ್ಞರು ನಿವೇದಿಸಿದುದೆಲ್ಲ ಸತ್ಯವೇ ಇರುವದು ಆದರೆ ನಿನ್ನ ಮಗಳಿಗೆ ಹದಿನಾಲ್ಕನೇ ವರ್ಷಕ್ಕೆ ವೈಧವ್ಯ ಪ್ರಾಪ್ತಿಯಾಗುವದು," ಎಂದು ಹೇಳಲಾಗಿ ರಾಜನು ನೆಲಕ್ಕೆ ಬಿದ್ದು ದುಃಖಸಾಗರದಲ್ಲಿ ಮಗ್ನನಾಗಲು ಆ ಪಂಡಿತನು, "ರಾಜನೇ! ಶೋಕಿಸಬೇಡ. ಶ್ರೀ ಸಾಂಬನ ದಯದಿಂದ ಮುಂದೆ ನಿನ್ನ ಮಗಳು ಪತಿಯನ್ನು ಪಡೆಯುವಳು." ಎಂದು ಹೇಳಿ ಹೊರಟು ಹೋದನು. ರಾಜನು ಬ್ರಾಹ್ಮಣನ ವಾಕ್ಯದಿಂದ ಚಿಂತಾಸಾಗರದಲ್ಲಿ ಮುಳುಗಿದನು. ಇತ್ತ ಸೀಮಂತಿನಿಯು ದಿನದಿನಕ್ಕೆ ಪೌರ್ಣಿಮಾ ಚಂದ್ರನಂತೆ ಬೆಳೆಯುತ್ತಾ ಯೌವನಕ್ಕೆ ಬಂದಳು. ಇವಳ ಮುಖವನ್ನು ಕಂಡು ಚಂದ್ರನು ಹರಮುಕುಟವನ್ನು ಸೇರಿದನು; ನೇತ್ರಗಳನ್ನು ನೋಡಿ ಕಮಲಗಳು ಸರೋವರವನ್ನು ಸೇರಿದವು; ಕುಚಗಳನ್ನು ಕಂಡು ಚಕ್ರವಾಕಗಳು ಆಕಾಶಕ್ಕೆ ಹಾರಿದವು; ಕಟಿಯನ್ನು ಕಂಡು ಕಂಠೀರವಗಳು ಅರಣ್ಯವನ್ನು ಸೇರಿದವು; ಮಂದಗಮನಕ್ಕೆ ಹಂಸಗಳು ಗರ್ವರಹಿತವಾದವು. ಸರ್ವಾಂಗ ಸುಂದರತ್ವಕ್ಕೆ ದೇವಸ್ತ್ರೀಯರು ಲಜ್ಜಾನ್ವಿತರಾದರು. ಈ ರೀತಿ ಯೌವನ ಪರಿಪೂರ್ಣಳಾದ ಸೀಮಂತಿನಿಯು ತನಗೆ ಹದಿನಾಲ್ಕನೇ ವರುಷದಲ್ಲಿ ವೈಧವ್ಯ ಪ್ರಾಪ್ತಿಯಾಗುವದೆಂದು ಸಖಿಯರ ಮುಖದಿಂದ ಕೇಳಿ ದುಃಖಾಕ್ರಾಂತಳಾಗಿ ಯಾಜ್ಞವಲ್ಕ್ಯರ

ಪತ್ನಿಯಾದ ಮೈತ್ರಿಯಿಗೆ ಶರಣಂಗತಳಾಗಲು, ಮುನಿಪತ್ನಿಯು ಇವಳ ದೈನ್ಯವನ್ನು ಲಾಲಿಸಿ, "ಹುಡುಗೀ! ಚಿಂತೆಮಾಡಬೇಡ!! ನಿನ್ನ ಸಂಕಟಗಳು ಪರಿಹಾರವಾಗುವ ಒಂದು ಕೃತಿಯನ್ನು ತಿಳಿಸುವೆನು" ಎಂದು ಹೇಳಿ ಸೋಮವಾರ ವ್ರತವನ್ನು ಬೋಧಿಸಿದಳು. ಸೀಮಂತಿನಿಯು ಅವಳಿಂದುಪದಿಷ್ಟಳಾಗಿ ಮನೆಗೆ ಬಂದು ಪ್ರತಿಸೋಮವಾರ ಪ್ರದೋಷಕಾಲದಲ್ಲಿ ಪಾರ್ವತಿಯಿಂದ ಯುಕ್ತನಾದ ಪರಮೇಶ್ವರನನ್ನು ಪೂಜಿಸುತ್ತಾ ದಂಪತಿಗಳನ್ನು ಯಥಾ ವಿಧಿಯಾಗಿ ಅರ್ಚಿಸಿ, ಬ್ರಾಹ್ಮಣರನ್ನು ಭೋಜನ ಮಾಡಿಸುತ್ತಿದ್ದಳು. ಚಿತ್ರವರ್ಮರಾಜನು ತನಯಳಿಗೆ ಯೌವನ ಪ್ರಾಪ್ತವಾದದ್ದನ್ನು ತಿಳಿದು, ನಿಷಧಾಧಿಪತಿಯಾದ ಇಂದ್ರಸೇನನ ಪುತ್ರನಾದ ಚಂದ್ರಾಂಗದನಿಗೆ ವಿಧಿಪೂರ್ವಕವಾಗಿ ವಿವಾಹ ಮಾಡಿದನು. ನಾಲ್ಕು ದಿವಸಗಳವರೆಗೂ ಮಹೋತ್ಸವವು ಚೆನ್ನಾಗಿ ನಡೆಯಿತು. ಅನಂತರ ಚಿತ್ರವರ್ಮರಾಜನು ಮಗಳನ್ನೂ, ಅಳಿಯನನ್ನೂ ತನ್ನಗೃಹದಲ್ಲಿಯೇ ಇರಿಸಿಕೊಂಡಬಳಿಕ ಕೆಲವು ದಿನಗಳಾಗಲು, ಒಂದಾನೊಂದು ದಿವಸ ಚಂದ್ರಾಂಗದನು ಬೇಟೆಯನ್ನಾಡುವ ನಿಮಿತ್ತವಾಗಿ ಸ್ನೇಹಿತರಿಂದೊಡಗೂಡಿ ಅರಣ್ಯವನ್ನು ಪ್ರವೇಶಿಸಿ ಮಧ್ಯಾಹ್ನದವರೆಗೆ ಅನೇಕ ಮೃಗಗಳನ್ನೂ, ಸಿಂಹ-ಶಾರ್ದೂಲಗಳನ್ನೂ ಸಂಹರಿಸಿ ಬಿಸಿಲಿನ ತಾಪದಿಂದ ಬಳಲಿ ಜಲಕ್ರೀಡಾರ್ಥವಾಗಿ ಯಮುನಾ ನದಿಗೆ ಹೊರಟನು.

ಅಲ್ಲಿ ಮಿತ್ರರಸಂಗಡ ಜಲಕ್ರೀಡೆಯಾಡುತ್ತಿರುವಾಗ ದುರ್ದೈವ ಮಹಾತ್ಮೆಯಿಂದ ಚಂದ್ರಾಂಗದನು ಒಂದು ಮಡುವಿನಲ್ಲಿ ಮುಳುಗಿದನು. ಅದನ್ನುನೋಡಿ ಅಲ್ಲಿದ್ದವರೆಲ್ಲರೂ ಹಾಹಾಕಾರ ಮಾಡಲನುವಾದರು. ಈ ವೃತ್ತಾಂತವನ್ನು ಚಿತ್ರವರ್ಮನು ಕೇಳಿ ಎದೆ ಎದೆ ಬಡಿದುಕೊಳ್ಳುತ್ತ ದುಃಖಸಾಗರದಲ್ಲಿ ಮಗ್ನನಾಗಿ ಅಲ್ಲಿಗೆ ಬಂದನು. ಎಷ್ಟೋಜನ ಅಂಬಿಗರು ನಾವನ್ನು ಹಾಕಿ ಶೋಧಿಸಿದರೂ ಚಂದ್ರಾಂಗದನು ದೊರಕಲಿಲ್ಲ ಸೀಮಂತಿನಿಯು ತಾಯಿಯೊಡನೆ ಅಲ್ಲಿಗೆ ಬಂದು ದುಃಖದಿಂದ ಸ್ಮೃತಿಯಿಲ್ಲದೆ ಭೂಮಿಯಲ್ಲಿ ಬಿದ್ದಳು ಮಂತ್ರಿ ಸಾಮಂತ-ಪುರಸ್ಥರೆಲ್ಲರೂ ಚಂದ್ರಾಂಗದನ ಮರಣವನ್ನು ಕೇಳಿ ಯಮುನಾ ನದಿಗೆ ಬಂದು ಹಾ ಹಾಕಾರ ಮಾಡುತ್ತಿದ್ದರು. ಆ ಶಬ್ದವು ಬ್ರಹ್ಮಾಂಡವನ್ನೇ ತುಂಬಿತು. ಸೀಮಂತಿನಿಯು ಎಚ್ಚರಾಗಿ, "ಹಾ ದೈವವೇ! ಪೂರ್ವದಲ್ಲಿ ಯಾವ ರಮಣಿಯ ಪತಿಯನ್ನು ಅಗಲಿಸಿದ್ದೇನೆಂದು ಈ ದುಃಖವನ್ನು ಕೊಟ್ಟೆ!! ಇವೊತ್ತಿಗೆ ನನ್ನ ತಪಸ್ಸು ಹಾಳಾಯಿತೇ! ಇಂದಿಗೆ ಶಂಕರನು ನನ್ನ ಮೇಲೆ ಮುನಿದನೇ!!! ನಾನು ಸ್ವಲ್ಪಾದರೂ ಪುಣ್ಯಕರ್ಮವನ್ನು ಮಾಡಿರಲಿಕ್ಕಿಲ್ಲವೇ? ನನ್ನಪತಿಯು ಹೇಗೆ ದೊರಕುವನು? ಯಾರಿಗೆ ಶರಣಾಗತಳಾಗಲಿ? ಯಾರು ನನ್ನ ದುಃಖವನ್ನು ಪರಿಹರಿಸುವರು? ಹಾ! ದಿಗ್ದೇವಗಳಿರಾ! ನೀವಾದರೂ ನನ್ನ ಮಂಗಲಸೂತ್ರದ ಮಾನವನ್ನು ಕಾಯಬಾರದೇ! ಭೂದೇವಿ! ನೀನಾದರೂ ಕೃಪೆ ಮಾಡು!! ವನದೇವತೆ! ಕಣ್ದೆರೆ!!" ಎಂದು ನಾನಾಪ್ರಕಾರವಾಗಿ ಶೋಕಿಸಹತ್ತಲು, ಇವಳ ದುಃಖವನ್ನು ಕೇಳಿ ಪಶುಪಕ್ಷ್ಯಾದಿಗಳು ಸಹ ಕಣ್ಣೀರನ್ನು

ಸುರಿಸಹತ್ತಿದವು. ನಂತರ ಪ್ರಧಾನನು ಸಕಲರಿಗೂ ಸಮಾಧಾನ ಹೇಳಿ ಮನೆಗೆ ಕರೆದೊಯ್ದನು. ಚಿತ್ರವರ್ಮನು ಜಾಮಾತನಿಗೆ ಮಾಡತಕ್ಕ ಉತ್ತರ ಕ್ರಿಯೆಗಳನ್ನು ಮಾಡಿದನು. ಸೀಮಂತಿನಿಯು ತನಗೆ ಎಂಥ ದುರ್ದೆಶೆ ಒದಗಿದಾಗ್ಯಾದರೂ ಮುನಿಪತ್ನಿಯಿಂದ ಉಪದಿಷ್ಟವಾದ ಸೋಮವಾರ ವ್ರತವನ್ನು ತಪ್ಪದೆ ಕಾಲಕಾಲಕ್ಕೆ ಜರಗಿಸುತ್ತಿದ್ದಳು. ಇತ್ತ ನಿಷಧ ದೇಶದಲ್ಲಿ ಚಂದ್ರಾಂಗದನ ತಂದೆಯಾದ ಇಂದ್ರಸೇನನನ್ನು ಶತ್ರುಗಳು ಸಮರದಲ್ಲಿ ಗೆದ್ದು ಆ ರಾಜನನ್ನು ಬಂಧನದಲ್ಲಿ ಇಟ್ಟು ಅವನ ರಾಜವನ್ನ ಪಹರಿಸಿದರು.

ಅತ್ತ ಚಂದ್ರಾಂಗದನು ನೀರಿನಲ್ಲಿ ಮುಳಗುತ್ತ ಮುಳಗುತ್ತಾ ಪಾತಾಳಕ್ಕೆ ಹೋಗಲು, ಜಲ-ಕ್ರೀಡಾರ್ಥವಾಗಿ ಬಂದ ನಾಗ-ಕನ್ನಿಕೆಯರು ಇವನ ರೂಪ ಲಾವಣ್ಯಾದಿಗಳಿಗೆ ಬೆರಗಾಗಿ ಕೆಲಹೊತ್ತು ತಟಸ್ಥರಾಗಿ ನಿಂತು ಮುಂದೆ ಅವರು ರಾಜ-ಕುವರನ ಹಸ್ತವನ್ನು ಹಿಡಿದು ನಾಗರಾಜನ ಹತ್ತರ ಕರೆದೊಯ್ಯಲಿಕ್ಕೆ ಹೆಜ್ಜೆಯನಿಡಹತ್ತಿದರು. ರತ್ನದ ಭಿತ್ತಿಗಳಿಂದಲೂ, ಮಾಣಿಕ್ಯಗಳ ಗೋಪುರಗಳಿಂದಲೂ, ಸುವರ್ಣದ ಕವಾಟಗಳಿಂದಲೂ ಪ್ರಕಾಶಮಾನವಾಗಿರುವ ತಕ್ಷಕೇಶನ ಪುರವನ್ನು ಕಂಡು ಚಂದ್ರಾಂಗದನು ಭ್ರಾಂತನಾದನು. ಬಳಿಕ ಆ ಕನ್ನಿಕೆಯರು ರಾಜಕುವರನನ್ನು ಸಹಸ್ರಮಣಿಗಳನ್ನು ಧರಿಸಿಕೊಂಡು ಸುವರ್ಣ ಪೀಠದಲ್ಲಿ ಕುಳಿತಿರುವ ನಾಗೇಂದ್ರನ ಎದುರಿಗೆ ತಂದು ನಿಲ್ಲಿಸಲಾಗಿ ಅವನು, "ನೀನು ಯಾರು ?" ಎಂದು ಕೇಳಲಾ ಚಂದ್ರಾಂಗದನು ನಮಸ್ಕರಿಸಿ ಧೈರ್ಯಗುಂದದೆ ತನ್ನ ಯಾವತ್ತು ವೃತ್ತಾಂತವನ್ನು ನಿವೇದಿಸಿದನು. ಶೇಷನು ಭಯವಿಲ್ಲದೆ ಮಾತಾಡುವ ರಾಜಕುವರನಿಗೆ ನಿನ್ನ ಉಪಾಸನಾದೇವತೆ ಯಾವದೆಂದು ಕೇಳಲಾಗಿ ಚಂದ್ರಾಂಗದನು, "ರಾಜನೇ ! ಸೃಷ್ಟಿ, ಸ್ಥಿತಿ, ಲಯಗಳಿಗೆ ಯಾವಾತನು ಕಾರಣನೋ, ಯಾವಾತನಮಹಿಮೆಯಿಂದ ಈ ಜಗತ್ತು ಚಲಿಸುತ್ತಿದೆಯೋ, ಅಂಥ ಪುರಾಣಪುರುಷನಾದ, ಪಾರ್ವತೀ ಪತಿಯಾದ ಶಂಕರನು," ಎಂದು ಹೇಳಲಾಗಿ ನಾಗೇಂದ್ರನು ಸಂತಸಬಟ್ಟು ರಾಜಕುವರನನ್ನು ಅಪ್ಪಿಕೊಂಡು, "ಬಾಲಕನೇ ! ಈ ಸ್ಥಳದಲ್ಲಿರುವ ದೇವತೆಗಳಿಗೆ ದುರ್ಲಭವಾದ ಪದಾರ್ಥಗಳನ್ನು ಗ್ರಹಿಸಿ ಯಾವ ಭಯವಿಲ್ಲದೆ ನಿಶ್ಚಿಂತಮನಸ್ಕನಾಗಿ ವಾಸ ಮಾಡು," ಎಂದು ಹೇಳಿದನು. ಅದಕ್ಕೆ ಚಂದ್ರಾಂಗದನು ಸಮ್ಮತಿಸದೆ, "ದೇವಾ! ನನ್ನ ತಂದೆ-ತಾಯಿಗಳಿಗೆ ನಾನೋರ್ವನೇ ಪುತ್ರನು. ನಾನು ನೀರಿನಲ್ಲಿ ಮುಳಗಿದ್ದದರಿಂದ ಅವರ ಅವಸ್ಥೆ ಏನಾಗಿರುವದೋ ಏನೋ !! ನನ್ನ ಪ್ರಿಯ ಪತ್ನಿಯಾದ ಹದಿನಾಲ್ಕು ವರ್ಷದ ಸೀಮಂತಿನಿಯು ನನ್ನ ವಿರಹದಿಂದ ಪ್ರಾಣಬಿಟ್ಟಿರಬಹುದು !!! ಕಾರಣ, ರಾಜಾ ! ನನಗೆ ತಂದೆ-ತಾಯಿಗಳ ದರ್ಶನ ತೆಗೆದುಕೊಳ್ಳಬೇಕೆಂದು ಇಚ್ಛೆಯಾಗಿರುವದು. ದಯಮಾಡಿ, ಅಪ್ಪಣೆ ಕೊಡಬೇಕು" ಎಂದು ಬೆಸಗೊಳ್ಳಲಾಗಿ ನಾಗೇಂದ್ರನು, 'ತಥಾಸ್ತು' ಎಂದು ರಾಜಕುವರನಿಗೆ ಅಮೌಲ್ಯ ರತ್ನಾಭರಣಗಳನ್ನು ಕೊಟ್ಟು, "ವತ್ಸಾ! ನನ್ನನ್ನು ಯಾವ

ಕಾಲದಲ್ಲಿ ಸ್ಮರಿಸುವಿಯೋ ಆವಾಗ್ಗೆ ಬರುವೆನು" ಎಂದು ಹೇಳಿ ಕೆಲವು ಸರ್ಪಗಳನ್ನು ಇವನ ಸಂಗಡ ಕೊಟ್ಟು ಮೇಲೆ ಬರಲಿಕ್ಕೆ ಅಪ್ಪಣೆ ನೀಡಿದನು.

ಇಷ್ಟು ಆಗುವದರೊಳಗೆ ಮೂರು ವರ್ಷಗಳು ಆಗಿಹೋಗಿದ್ದವು ನಂತರ ಚಂದ್ರಾಂಗದನು ಸರ್ಪಗಳೊಂದಿಗೆ ಯಮುನಾ ನದಿಗೆ ಬಂದು ದಡದಲ್ಲಿ ಸಂಚರಿಸುತ್ತಿದ್ದನು. ಅದೇಕಾಲದಲ್ಲಿ ಸೀಮಂತಿನಿಯು ಸಖಿಯರಿಂದ ಯುಕ್ತಳಾಗಿ ಸ್ನಾನಾರ್ಥವಾಗಿ ಬಂದಿದ್ದಳು. ಸಂಚರಿಸುವ ಚಂದ್ರಾಂಗದನನ್ನು ನೋಡಿ ಸೀಮಂತಿನಿಯು ವಿಸ್ಮಿತಳಾಗಿ ಪುನಃ ಪುನಃ ಅವನನ್ನೇ ದಿಟ್ಟಿಸಿ ನೋಡಹತ್ತಿದಳು. ಚಂದ್ರಾಂಗದನಾದರೂ ಸೀಮಂತಿನಿಯನ್ನೇ ನೋಡುತ್ತಾ, ಕುಂಕುಮ ರಹಿತಳಾಗಿಯೂ, ಮಾಂಗಲ್ಯಸೂತ್ರ-ವರ್ಜಿತಳಾಗಿಯೂ, ಕೃಶವಾದ ಶರೀರವುಳ್ಳವಳಾಗಿಯೂ ಇರುವದನ್ನು ಕಂಡು ಹತ್ತರಬಂದು ಪ್ರೇಮದಿಂದ, "ಸುದತಿಯೇ? ನಿನ್ನ ಅವಸ್ಥೆಯು ಹಿಗೇಕೆ ಆಗಿರುವದು?" ಎಂದು ಕೇಳಲಾಗಿ ಸೀಮಂತಿನಿಯು ತನ್ನ ವೃತ್ತಾಂತವನ್ನೆಲ್ಲ ಹೇಳುತ್ತಾ, ನಡುನಡುವೆ ಕಣ್ಣೀರನ್ನು ಸುರಿಸುತ್ತ, ಗದ್ಗದಿತ-ಕಂಠವುಳ್ಳವಳಾಗಿ ಮಾತಾಡಲಿಕ್ಕೆ ಶಕ್ತಿಸಾಲದೆ ಕುಳಿತಿರುವದನ್ನು ಕಂಡು ಇವಳ ಸಖಿಯು. "ಪುರುಷಶ್ರೇಷ್ಠನೇ! ಮೂರು ವರ್ಷಗಳ ಹಿಂದೆ ಇವಳ ವಲ್ಲಭನು ಇದೇ ಮಡುವಿನಲ್ಲಿ ಮುಳುಗಿ ಮೃತಪಟ್ಟನು. ಅಂದಿನಾರಭ್ಯ ಇವಳು ಕೃಶಳಾಗುತ್ತಿರುವಳು," ಎಂದು ಹೇಳಲು, ಸೀಮಂತಿನಿಯು ಚಂದ್ರಾಂಗದನ ವೃತ್ತಾಂತವನ್ನು ಕೇಳೆಂದು ಸಖಿಗೆ ಸೂಚಿಸಲು ಅವಳು ರಾಜಕುವರನ ವೃತ್ತಾಂತವನ್ನು ಕೇಳಿದಳು.

ಚಿತ್ರಾಂಗದನು, "ನಾನು ಸಿದ್ಧಪುರುಷನು. ಮನಬಂದಲ್ಲಿ ಗಮಿಸತಕ್ಕವನು ನನಗೆ ಭೂತ—ಭವಿಷ್ಯ—ವರ್ತಮಾನಕಾಲಗಳ ಜ್ಞಾನವಿರುವದು," ಎಂದು ಹೇಳಿ ಸೀಮಂತಿನಿಯ ಕೈಯನ್ನು ಹಿಡಿದು ಮುಂದಕ್ಕೆ ಕರಕೊಂಡು ಹೋಗಿ, "ಸುದತಿಯೇ! ನಿನ್ನವಲ್ಲಭನು ಜೀವದಿಂದಿರುವನು. ನಿನಗೆ ಆತನ ದರ್ಶನವಾಗುವದು. ಇನ್ನು ಮೂರು ದಿನಗಳಲ್ಲಿ ಬರುವನು. ಇದನ್ನು ಶಂಕರನ ಶಪಥಪೂರ್ವಕವಾಗಿ ಹೇಳುವೆನು. ಸತ್ಯವೆಂದು ತಿಳಿ. ಈ ವರ್ತಮಾನವನ್ನು ಮಾತ್ರ ಯಾರಿಗೂ ತಿಳಿಸಬೇಡ. ಕಂಡೆಯಾ!" ಎನಲಾಗಿ ಸೀಮಂತಿನಿಯು ಚೆನ್ನಾಗಿ ಇವನನ್ನೇ ದೃಷ್ಟಿಸಿ, "ಆಹಾ! ನನ್ನ ವಲ್ಲಭನು ಇವನೇ ಇರಬಹುದು!" ಎಂದು ನಿಶ್ಚೈಸಿ ಪುನಃ ವಿಚಾರಿಸಲಾರಂಭಿಸಿದಳು. ಮೃತಪಟ್ಟ ಪುರುಷನು ತಿರುಗಿ ಬರುವದು ಹೇಗೆ? ಪರಪುರುಷನಾದರೆ ನನ್ನ ಹಸ್ತವನ್ನಾದರೂ ಹೇಗೆ ಹಿಡಿದಾನು? ನನ್ನ ಸಂಗಡ ಪ್ರೇಮಯುಕ್ತ ಭಾಷಣಗಳನ್ನಾದರೂ ಹೇಗೆ ಆಡುವನು? ಮರಣಹೊಂದಿದ ಪತಿಯು ಅಮೃತವನ್ನು ಕುಡಿದು ಬಂದನೋ? ಇಲ್ಲವೆ, ಕಾಲನೇ ಬಿಟ್ಟನೋ! ಎಂದು ವಿಚಾರಿಸಿ, ಹೇ ಶಂಕರಾ ಕೈಲಾಸಪತೇ!! ವಿಶ್ವಂಭರಾ!!! ಈ ಮಾತು ನಿಶ್ಚಯವಾದರೆ ಲಕ್ಷ ಬ್ರಾಹ್ಮಣರಿಗೆ ಭೋಜನ

ನಹನ್ನು ಮಾಡಿಸುವೆನ ; ಲಕ್ಷ ಬಿಲ್ವದಳಗಳನ್ನು ಏರಿಸುವೆನು; ಲಕ್ಷ ದಂಪತಿಗಳನ್ನು ಪೂಜಿಸುವೆನು; ಎಂದು ಬೇಡಿಕೊಳ್ಳುವ ಸಮಯದಲ್ಲಿ ಚಂದ್ರಾಂಗದನು “ ಸೀಮಂತಿನಿಯೆ ! ನಿನ್ನ ವಲ್ಲಭನು ಬರುವ ವರ್ತಮಾನವನ್ನು ನಿನ್ನ ಅತ್ತೆ ಮಾವಂದರಿಗೆ ತಿಳಿಸುವದಕ್ಕಾಗಿ ನಿಷಧನಗರಿಗೆ ಹೋಗುವೆ ” ಎಂದು ಹೇಳಿ ನಾಗಗಳೊಂದಿಗೆ ಪೂರಮಟ್ಟನು. ಸೀಮಂತಿನಿಯಾದರೂ ಸಂತೋಷಭರಿತಳಾಗಿ ಸಖಿಯಳೊಂದಿಗೆ ಗೃಹವನ್ನು ಕುರಿತು ಗಮನ ಮಾಡಿದಳು.

ಮಧ್ಯಮಾರ್ಗದಲ್ಲಿ ಸೀಮಂತಿನಿಗೆ, “ ಏನೇ ! ನಿನ್ನ ಹಸ್ತವನ್ನು ಧರಿಸಿದ ಪುರುಷನಾರು ? ನಿನ್ನಕೂಡ ಇಷ್ಟು ಪ್ರೇಮದ ಭಾಷಣಗಳನ್ನಾಡಬೇಕಾದರೆ ಅವನೇ ನಿನ್ನಪತಿಯೆಂದು ತೋರುವದು, ಇಲ್ಲದಿದ್ದರೆ ನಿನ್ನ ಕರಸ್ಪರ್ಶ ಮಾಡುವವನು ಜಗತ್ತಿನಲ್ಲಿ ಮತ್ತಾನನಿರುವನು ? ” ಎಂದು ಸಖಿಯರು ಕೇಳಲಾಗಿ ಸೀಮಂತಿನಿಯು, “ ಸಖಿಯರೇ ! ಈ ವೃತ್ತಾಂತವನ್ನು ಯಾರಿಗೂ ತಿಳಿಸಬೇಡಿರಿ. ಇನ್ನು ಮೂರು ದಿವಸಗಳಲ್ಲಿ ಏನೇನು ಚಮತ್ಕಾರವಾಗುವದೆಂಬುದನ್ನು ನೀವೇ ನೋಡುವಿರಿ. ” ಎಂದು ಹೇಳಿ ಗೃಹಕ್ಕೆ ಪ್ರಯಾಣಮಾಡಿದಳು.

ಇತ್ತ ಚಿತ್ರಾಂಗದನು ವೇಳೆಗಳೆಯದೆ ನಾಗಗಳೊಂದಿಗೆ ನಿಷಧಪಟ್ಟಣದ ಸಮೀಪಕ್ಕೆ ಬಂದು ಒಂದು ಉಪವನದಲ್ಲಿ ಕುಳಿತನು. ಅಲ್ಲಿಂದ ಮುಂದೆ ಒಂದು ನಾಗವು ಮನುಷ್ಯನ ವೇಷವನ್ನು ಧರಿಸಿ, ವನವನ್ನು ಪ್ರವೇಶಮಾಡಿ ಶತ್ರುವಿನ ಮುಂಭಾಗದಲ್ಲಿ ಬಂದು, “ ಎಲೋ ಮೂರ್ಖಾ !! ಚಿತ್ರಾಂಗದನು ಹನ್ನೆರಡು ಸಹಸ್ರ ನಾಗಸೇನೆಯೊಂದಿಗೆ ಬಂದಿರುವನು. ನೀನು ಯುದ್ಧಕ್ಕೆ ಬರುವಿಯೋ ? ಇಲ್ಲದಿದ್ದರೆ ಅವನ ರಾಜ್ಯವನ್ನು ಬಿಡುವಿಯೋ ? ” ಎಂದು ಕೇಳಲಾಗಿ ಶತ್ರುವು ಭೀತಿಗೊಂಡು ಚಂದ್ರಾಂಗದನೆದುರಿಗೆ ಸಮರಕ್ಕೆ ಸನ್ನದ್ಧನಾದರೆ ನನ್ನ ಪ್ರಾಣವೇ ಉಳಿಯಲಿಕ್ಕಿಲ್ಲವೆಂದು ನಿಶ್ಚೈಸಿ ಇಂದ್ರಸೇನ-ರಾಜನ ಬಂಧನವನ್ನು ಬಿಡಿಸಿ ಸಿಂಹಾಸನದ ಮೇಲೆ ಕುಳ್ಳಿರಿಸಲು, ಇಂದ್ರಸೇನನು ಬಂದ ನಾಗದೂತನಿಂದ ಮಗನ ವರ್ತಮಾನವನ್ನು ತಿಳಿದು, ಮಹಾ ಸಂಭ್ರಮದೊಡನೆ ಪಟ್ಟಣವನ್ನು ಸಿಂಗರಿಸಿ, ಚತುರಂಗ ಬಲಸಹಿತವಾಗಿ ಮಗನನ್ನು ಇದಿರ್ಗೊಂಡು ಬರಲಿಕ್ಕೆ ಗಮನ ಮಾಡಿದನು. ಸಮಸ್ತ ಪಟ್ಟಣವಾಸಿಗಳು ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ಹೊರಟರು. ಇಂದ್ರಸೇನನು ಬಂದು ಮಗನನ್ನು ಅಪ್ಪಿಕೊಳ್ಳಲಾಗಿ ಈರ್ವರಿಗೂ ಆನಂದ ಬಾಷ್ಪಗಳು ಉದರಿದವು. ಶತ್ರುವು ಬಂದು ನನ್ನನ್ನು ರಕ್ಷಿಸೆಂದು ಬಿನ್ನೈಸಹತ್ತಿದನು. ನಂತರದಲ್ಲಿ ಚಿತ್ರಾಂಗದನು ತನ್ನ ವರ್ತಮಾನವನ್ನು ಯಾವತ್ತರಿಗೂ ತಿಳುಹಿಸಲಾಗಿ ಸರ್ವರೂ ಕೇಳಿ ಆಶ್ಚರ್ಯ-ಭೀತಿಯುಕ್ತರಾದರು. ಬಳಿಕ ಮಹಾ ಸಂಭ್ರಮದೊಡನೆ ಸರ್ವರೂ ಪುರವನ್ನು ಪ್ರವೇಶಿಸಿದರು. ಇಂದ್ರಸೇನ-ರಾಜನು ಈ ಮಂಗಲ ವರ್ತಮಾನವನ್ನು ಆರ್ಯಾವರ್ತಾಧಿಪನಿಗೆ ತಿಳಿಸುವದಕ್ಕೋಸುಗ ದೂತನನ್ನು ಕಳುಹಿದನು. ಚಿತ್ರವರ್ಮರಾಜನು ದೂತನಿಂದ

ನೀನು ಇಂಥ ನೀಚತರ ಕಾರ್ಯವನ್ನು ನಮಗೆ ಹೇಳಬಾರದು, ” ಎಂದು ವಿಪ್ರ ಪುತ್ರರು ನಿವೇದಿಸಲಾಗಿ ರಾಜನು, “ ವಿಪ್ರೋತ್ತಮರೆ ! ದೇವತಾ-ಗುರು-ಮಾತಾ ಪಿತರು ಮತ್ತು ಭೂಪನು ಹೇಳಿದ ಕಾರ್ಯವು ಅಶುಭವೇ ಇರಲಿ ! ಅದನ್ನು ನೆರವೇರಿಸಲಿಕ್ಕೇಬೇಕೆಂಬ ಸ್ಮೃತಿಪ್ರಮಾಣವನ್ನು ಅರಿಯಲಾರಿರಾ ? ಆದ್ದರಿಂದ ನಾನು ಹೇಳಿದ ಮೇರೆಗೆ ನಡೆಯಲಿಕ್ಕೆಬೇಕು ” ಎಂದು ಆಗ್ರಹಪಡಲಾಗಿ ವಿಪ್ರ ಕುಮಾರರು ಉಪಾಯವಿಲ್ಲದೆ ರಾಜಾಜ್ಞೆಯಮೇರೆಗೆ ಅವನಿಂದ ಸಕಲ ವಸ್ತ್ರಾ ಭರಣಗಳನ್ನ ತೆಗೆದುಕೊಂಡು ಸಾರಸ್ವತನ ಪುತ್ರನಾದ ಸೋಮವಂತನು ಜಡಿ ಯಿಂದ ಹೆಳಲು ಹಾಕಿಕೊಂಡು, ಹಣೆಯಲ್ಲಿ ಕಸ್ತೂರೀ ತಿಲಕವನ್ನಿಟ್ಟು, ಕರದಲ್ಲಿ ಕಂಕಣಗಳನ್ನು ಧರಿಸಿ, ಜರತಾರೀ ಕುಪ್ಪಸವನ್ನು ತೊಟ್ಟು, ಪಟ್ಟೆಪೀತಾಂಬರ ವನ್ನುಟ್ಟು, ಸರ್ವಾಭರಣಭೂಷಿತನಾಗಿ ಎರಡನೇ ರೀತಿಯಂತೆ ಸ್ತ್ರೀವೇಷವನ್ನು ಧರಿಸಿದನು. ಸುಮೇಧನಾದರೂ ಉತ್ತಮ ಪೋಷಾಕನ್ನು ಧರಿಸಿದನು ಹೀಗೆ ಇಬ್ಬರೂ ದಂಪತಿಗಳಾಗಿ ನಿಷಧಪುರಕ್ಕೆ ಸೀಮಂತಿನಿಯ ಹತ್ತರಬಂದರು.

ಸೋಮವಾರ ಪ್ರದೋಷಕಾಲದಲ್ಲಿ ನಿತ್ಯದಂತೆ ಸಕಲಕಲಾಪರಿಪೂರ್ಣಳಾದ ಸೀಮಂತಿನಿಯು ದಂಪತಿ-ಪೂಜೆಯನ್ನು ಆರಂಭಿಸಲು, ಅದೇ ವೇಳೆಯಲ್ಲಿ ಈ ಕಪಟ ದಂಪತಿಗಳಾದರೂ ಅಲ್ಲಿಗೆಬಂದು ತಮಗುಚಿತವಾದ ಆಸನದಲ್ಲಿ ಕುಳಿತರು. ಸೀಮಂತಿನಿಯು ಇವರನ್ನು ನೋಡಿ ಕಪಟದಂಪತಿಗಳೆಂದು ತಿಳಿದಾಗ್ಯೂ ಕೇವಲ ಭಕ್ತಿಭಾವದಿಂದ ಶಂಕರಪಾರ್ವತಿ ರೂಪರೆಂದು ತಿಳಿದು ಅರ್ಚನಮಾಡಿ ಅನೇಕ ಪಕ್ವಾನ್ನಗಳನ್ನು ಭೋಜನಕ್ಕೆ ನೀಡಿ, ಅವರು ತೃಪ್ತಿಯಾದನಂತರ ಹೇರಳ ದ್ರವ್ಯವನ್ನೂ, ವಸ್ತ್ರಾಲಂಕಾರಗಳನ್ನೂ ಕೊಟ್ಟು, ಪಾರ್ವತೀ-ಪರಮೇಶ್ವರ ರೂಪ ರೆಂಬ ಭಾವದಿಂದ ನಮಸ್ಕರಿಸಿ, ತಮ್ಮ ತಮ್ಮ ಗೃಹಕ್ಕೆ ಹೋಗಲಿಕ್ಕೆ ಎಲ್ಲ ದಂಪ ತಿಗಳಿಗೂ ಅಪ್ಪಣೆಯನ್ನಿತ್ತಳು. ಮಹಾ ಭಕ್ತಾಗ್ರೇಸರಳಾದ ಸೀಮಂತಿನಿ ಯಿಂದ ಪಾರ್ವತಿಯ ಆವ್ಹಾನ ಮಾಡಿಸಿಕೊಂಡ ಕಪಟ ಸ್ತ್ರೀಯಾದ ಸೋಮವಂತನು ಅವಳ ಭಕ್ತಿಪ್ರಭಾವದಿಂದ ನಿಜವಾದ ಸ್ತ್ರೀಯೇ ಆದನು. ಬಳಿಕ ಈ ಕಪಟದಂಪತಿಗಳು ವಿಪುಲ ದ್ರವ್ಯವನ್ನು ತೆಗೆದುಕೊಂಡು ತಮ್ಮಪಟ್ಟ ಣಕ್ಕೆ ಬರುವದರ ,ದೆಶೆಯಿಂದ ಮಾರ್ಗಸ್ಥರಾಗಲು, ಮಧ್ಯಮಾರ್ಗದಲ್ಲಿ ನಿಜ ವಾಗಿ ಸ್ತ್ರೀಯಾದ ಸೋಮವಂತನು, ಮದನಬಾಧೆಯಿಂದ ಪೀಡಿತನಾಗಿ ಸುಮೇ ಧನಕಡೆಗೆ ತಿರುಗಿ, ಮಂದಹಾಸಮಾಡುತ್ತ ಕಡೆಗಣ್ಣೋಟದಿಂದ ನೋಡುತ್ತಾ “ ಪ್ರಾಣೇಶ್ವರಾ ! ಯಾಕೆ ಸುಮ್ಮನೆ ಹೋಗುವಿ ? ಈ ಅರಣ್ಯದಲ್ಲಿ ಯಾರೂ ಇಲ್ಲ. ಇದು ನಿಜವಾದ ಏಕಾಂತ ಸ್ಥಾನವು. ಆದ್ದರಿಂದ ಮದನ ಬಾಧೆಯಿಂದ ಪೀಡಿತಳಾದ ನನಗೆ ಸುರತಸುಖವನ್ನು ಕೊಟ್ಟು ಆನಂದಗೊಳಿಸು, ” ಎಂದು ಪರಿಪರಿಯಾಗಿ ಬೇಡಲಾರಂಭಿಸಲು, ಸತ್ವಶಾಲಿಯಾದ ಸುಮೇಧನು ಯಾವದನ್ನು ತಿಳಿಯದೆ, “ ಎಲೋ ! ಮಿತ್ರನಾದ ಸೋಮವಂತನೇ !! ಯಾಕೆ ನನಗೆ

## ಏಳನೆಯ ಅಧ್ಯಾಯ.

## ಸುಮೇಧಾ, ಸೋಮವಂತ, ಭದ್ರಾಯು ಇವರ ಕಥೆಗಳು.

# ಸುಮೇಧಾ, ಸೋಮವಂತ ಇವರ ಕಥೆ.



ಪೂರ್ವದಲ್ಲಿ ವಿದರ್ಭದೇಶದಲ್ಲಿ ವೇದಮಿತ್ರ ಮತ್ತು ಸಾರಸತ್ವ ಎಂಬ ಈರ್ವರು, ಪರಸ್ಪರವಾಗಿ ಮಿತ್ರರೂ, ವೇದ ವೇದಾಂತ ಪಂಡಿತರೂ, ಏಕಸ್ಥಾನದಲ್ಲಿ ವಾಸಮಾಡತಕ್ಕವರೂ ಇದ್ದರು. ವೇದಮಿತ್ರನಿಗೆ ಸುಮೇಧಾ ಯೆಂಬವನೂ, ಸಾರಸ್ವತನಿಗೆ ಸೋಮವಂತನೆಂಬವನೂ ಹೀಗೆ ಇಬ್ಬರು ಮಕ್ಕಳಿದ್ದರು. ಇವರು ಸಮವಾದ ಬುದ್ಧಿಯುಳ್ಳವರೂ, ಒಂದೇ ವಯಸ್ಸಿನವರೂ, ಸಮವಾಗಿ ಮೀಮಾಂಸೆ, ತರ್ಕ, ಜ್ಯೋತಿಷ್ಯ, ವ್ಯಾಕರಣ, ವೇದವೇದಾಂತಗಳಲ್ಲಿ ಪಾರಂಗತರೂ ಆಗಿದ್ದರು. ಈರ್ವರಿಗೂ ಹದಿನಾರುವರ್ಷಗಳಾಗಲು ಪಿತರಾದ ವಿಪ್ರದ್ವಯರು, "ಬಾಲಕರೆ! ನೀವು ಯೌವನಕ್ಕೆ ಪ್ರಾಪ್ತರಾದಿರಿ. ಕಾರಣ, ನೀವು ನಿಮ್ಮ ವಿದ್ಯಾಪ್ರಭಾವವನ್ನು ವಿದರ್ಭೇಶನೆದುರಿಗೆ ತೋರಿಸಿ ಅವನಿಂದ ದ್ರವ್ಯವನ್ನು ಸಂಪಾದಿಸಿ ವಿವಾಹಮಾಡಿಕೊಳ್ಳಿರಿ" ಎಂದು ಹೇಳಿದನು.

ತಂದೆಯ ಹೇಳಿಕೆಯಂತೆ ಆ ವಿಪ್ರಕುಮಾರರು ರಾಜನೆಡೆಗೆ ಬಂದು ತಮ್ಮ ವಿದ್ಯೆಯಿಂದ ಭೂಪತಿಯ ಮನವನ್ನು ಸಂತೋಷಪಡಿಸಿ, ವಿವಾಹಮಾಡಿಕೊಳ್ಳುವದಕ್ಕೆ ಧನವನ್ನು ಯಾಚಿಸಲು ರಾಜನು ನಕ್ಕು, "ವಿಪ್ರಕುಮಾರೋತ್ತಮರೇ! ನಿಷಧರಾಜನ ಪತ್ನಿಯಾದ ಸೀಮಂತಿನಿಯು ಪ್ರತಿಸೋಮವಾರದಲ್ಲಿ ದಂಪತಿಗಳನ್ನು ಪೂಜಿಸಿ, ಹೇರಳ ದ್ರವ್ಯವನ್ನು ದಕ್ಷಿಣಾರ್ಥವಾಗಿ ಕೊಡುತ್ತಿರುವಳು. ಕಾರಣ ನೀವೀರ್ವರೊಳಗೆ ಓರ್ವನು ಸ್ತ್ರೀವೇಷವನ್ನು ಧರಿಸಿ ದಂಪತಿಗಳಾಗಿ ಅವಳ ಹತ್ತಿರ ಹೋಗಿ ವಿಶೇಷ ದ್ರವ್ಯವನ್ನು ಪಡೆಯಿರಿ. ಆನಂತರ ನನ್ನ ಹತ್ತಿರ ಬಂದರೆ ನಾನಾದರೂ ಸಾಕಷ್ಟು ದ್ರವ್ಯವನ್ನು ಕೊಡುವೆನು" ಎಂದು ಹೇಳಲಾಗಿ ಆ ದ್ವಿಜ-ತನಯರು, "ರಾಜನ್! ದೇವತೆಗಳಲ್ಲಿಯೂ, ಗುರುಗಳಲ್ಲಿಯೂ, ಮಾತಾ-ಪಿತೃಗಳಲ್ಲಿಯೂ, ರಾಜಕುಲಗಳಲ್ಲಿಯೂ, ಕಪಟ ಮಾಡಿದರೆ ಈಗಲೇ ನಾಶವಾಗುವೆನೆಂಬ ಧರ್ಮವಾಕ್ಯವನ್ನು ಅರಿಯದಿರುವಿಯಾ? ಸ್ತ್ರೀ ವೇಷಧರಿಸಿದ ಪುರುಷನನ್ನು ನೋಡಿದರೆ ಸಚೈಲ ಸ್ನಾನಮಾಡಬೇಕೆಂದೂ, ಸ್ತ್ರೀ ವೇಷ ಧರಿಸುವವನು ಜನ್ಮ ಜನ್ಮಗಳಲ್ಲಿ ಸ್ತ್ರೀಯಾಗಿಯೇ ಉತ್ಪನ್ನನಾಗುವನೆಂದೂ ನಿಯಮಿತಿ ಇರುವದಿಲ್ಲವೇ? ಕಪಟಮಾಡುವ ಮನುಜರಲ್ಲಿ ಪಾಪ, ಭಯ, ವೈರತ್ವ, ನಿಂದೆಗಳು ವಾಸಮಾಡುವದಿಲ್ಲವೇ? ಸಕಲ ವಿಚಾರಜ್ಞನಾದ

ನೀನು ಇಂಥ ನೀಚತರ ಕಾರ್ಯವನ್ನು ನಮಗೆ ಹೇಳಬಾರದು, ” ಎಂದು ವಿಪ್ರ ಪುತ್ರರು ನಿವೇದಿಸಲಾಗಿ ರಾಜನು, “ ವಿಪ್ರೋತ್ತಮರೆ! ದೇವತಾ-ಗುರು-ಮಾತಾ ಪಿತರು ಮತ್ತು ಭೂಪನು ಹೇಳಿದ ಕಾರ್ಯವು ಅಶುಭವೇ ಇರಲಿ! ಅದನ್ನ ನೆರವೇರಿಸಲಿಕ್ಕೇಬೇಕೆಂಬ ಸ್ಮೃತಿಪ್ರಮಾಣವನ್ನು ಅರಿಯಲಾರಿರಾ? ಆದ್ದರಿಂದ ನಾನು ಹೇಳಿದ ಮೇರೆಗೆ ನಡೆಯಲಿಕ್ಕೆಬೇಕು ” ಎಂದು ಆಗ್ರಹಪಡಲಾಗಿ ವಿಪ್ರ ಕುಮಾರರು ಉಪಾಯವಿಲ್ಲದೆ ರಾಜಾಜ್ಞೆಯಮೇರೆಗೆ ಅವನಿಂದ ಸಕಲ. ವಸ್ತ್ರಾ ಭರಣಗಳನ್ನು ತೆಗೆದುಕೊಂಡು ಸಾರಸ್ವತನ ಪುತ್ರನಾದ ಸೋಮವಂತನು ಜಡಿ ಯಿಂದ ಹೆಳಲು ಹಾಕಿಕೊಂಡು, ಹಣೆಯಲ್ಲಿ ಕಸ್ತೂರೀ ತಿಲಕವನ್ನಿಟ್ಟು ಕರದಲ್ಲಿ ಕಂಕಣಗಳನ್ನು ಧರಿಸಿ, ಜರತಾರೀ ಕುಪ್ಪಸವನ್ನು ತೊಟ್ಟು, ಪಟ್ಟೆಪೀತಾಂಬರ ವನ್ನುಟ್ಟು, ಸರ್ವಾಭರಣಭೂಷಿತನಾಗಿ ಎರಡನೇ ರೀತಿಯಂತೆ ಸ್ತ್ರೀವೇಷವನ್ನು ಧರಿಸಿದನು. ಸುಮೇಧನಾದರೂ ಉತ್ತಮ ಪೋಷಾಕನ್ನು ಧರಿಸಿದನು ಹೀಗೆ ಇಬ್ಬರೂ ದಂಪತಿಗಳಾಗಿ ನಿಷಧಪುರಕ್ಕೆ ಸೀಮಂತಿನಿಯ ಹತ್ತಿರಬಂದರು.

ಸೋಮವಾರ ಪ್ರದೋಷಕಾಲದಲ್ಲಿ ನಿತ್ಯದಂತೆ ಸಕಲಕಲಾಪರಿಪೂರ್ಣಳಾದ ಸೀಮಂತಿನಿಯು ದಂಪತಿ-ಪೂಜೆಯನ್ನು ಆರಂಭಿಸಲು, ಅದೇ ವೇಳೆಯಲ್ಲಿ ಈ ಕಪಟ ದಂಪತಿಗಳಾದರೂ ಅಲ್ಲಿಗೆಬಂದು ತಮಗುಚಿತವಾದ ಆಸನದಲ್ಲಿ ಕುಳಿತರು. ಸೀಮಂತಿನಿಯು ಇವರನ್ನು ನೋಡಿ ಕಪಟದಂಪತಿಗಳೆಂದು ತಿಳಿದಾಗ್ಯೂ ಕೇವಲ ಭಕ್ತಿಭಾವದಿಂದ ಶಂಕರಪಾರ್ವತಿ ರೂಪರೆಂದು ತಿಳಿದು ಅರ್ಚನಮಾಡಿ ಅನೇಕ ಪಕ್ವಾನ್ನಗಳನ್ನು ಭೋಜನಕ್ಕೆ ನೀಡಿ, ಅವರು ತೃಪ್ತಿಯಾದನಂತರ ಹೇರಳ ದ್ರವ್ಯವನ್ನೂ, ವಸ್ತ್ರಾಲಂಕಾರಗಳನ್ನೂ ಕೊಟ್ಟು, ಪಾರ್ವತೀ-ಪರಮೇಶ್ವರ ರೂಪ ರೆಂಬ ಭಾವದಿಂದ ನಮಸ್ಕರಿಸಿ, ತಮ್ಮ ತಮ್ಮ ಗೃಹಕ್ಕೆ ಹೋಗಲಿಕ್ಕೆ ಎಲ್ಲ ದಂಪ ತಿಗಳಿಗೂ ಅಪ್ಪಣೆಯನ್ನಿತ್ತಳು. ಮಹಾ ಭಕ್ತಾಗ್ರೇಸರಳಾದ ಸೀಮಂತಿನಿ ಯಿಂದ ಪಾರ್ವತಿಯು ಆವ್ಹಾನ ಮಾಡಿಸಿಕೊಂಡ ಕಪಟ ಸ್ತ್ರೀಯಾದ ಸೋಮವಂತನು ಅವಳ ಭಕ್ತಿಪ್ರಭಾವದಿಂದ ನಿಜವಾದ ಸ್ತ್ರೀಯೇ ಆದನು. ಬಳಿಕ ಈ ಕಪಟದಂಪತಿಗಳು ವಿಪುಲ ದ್ರವ್ಯವನ್ನು ತೆಗೆದುಕೊಂಡು ತಮ್ಮಪಟ್ಟ ಣಕ್ಕೆ ಬರುವದರ ಉದ್ದೇಶದಿಂದ ಮಾರ್ಗಸ್ಥರಾಗಲು, ಮಧ್ಯಮಾರ್ಗದಲ್ಲಿ ನಿಜ ವಾಗಿ ಸ್ತ್ರೀಯಾದ ಸೋಮವಂತನು, ಮದನಬಾಧೆಯಿಂದ ಪೀಡಿತನಾಗಿ ಸುಮೇ ಧನಕಡೆಗೆ ತಿರುಗಿ, ಮಂದಹಾಸಮಾಡುತ್ತ ಕಡೆಗಣ್ಣೋಟದಿಂದ ನೋಡುತ್ತಾ “ ಪ್ರಾಣೇಶ್ವರಾ! ಯಾಕೆ ಸುಮ್ಮನೆ ಹೋಗುವಿ? ಈ ಅರಣ್ಯದಲ್ಲಿ ಯಾರೂ ಇಲ್ಲ. ಇದು ನಿಜವಾದ ಏಕಾಂತ ಸ್ಥಾನವು. ಆದ್ದರಿಂದ ಮದನ ಬಾಧೆಯಿಂದ ಪೀಡಿತಳಾದ ನನಗೆ ಸುರತಸುಖವನ್ನು ಕೊಟ್ಟು ಆನಂದಗೊಳಿಸು, ” ಎಂದು ಪರಿಪರಿಯಾಗಿ ಬೇಡಲಾರಂಭಿಸಲು, ಸತ್ವಶಾಲಿಯಾದ ಸುಮೇಧನು ಯಾವದನ್ನು ತಿಳಿಯದೆ, “ ಎಲೋ! ಮಿತ್ರನಾದ ಸೋಮವಂತನೇ!! ಯಾಕೆ ನನಗೆ

## ಏಳನೆಯ ಅಧ್ಯಾಯ.

### ಸುಮೇಧಾ, ಸೋಮವಂತ. ಭದ್ರಾಯು ಇವರ ಕಥೆಗಳು.

# ಸುಮೇಧಾ, ಸೋಮವಂತ ಇವರ ಕಥೆ.



ಪೂರ್ವದಲ್ಲಿ ವಿದರ್ಭದೇಶದಲ್ಲಿ ವೇದಮಿತ್ರ ಮತ್ತು ಸಾರಸತ್ವ ಎಂಬ ಈರ್ವರು, ಪರಸ್ಪರವಾಗಿ ಮಿತ್ರರೂ, ವೇದ ವೇದಾಂತ ಪಂಡಿತರೂ, ಏಕಸ್ಥಾನ ದಲ್ಲಿ ವಾಸಮಾಡತಕ್ಕವರೂ ಇದ್ದರು. ವೇದಮಿತ್ರನಿಗೆ ಸುಮೇಧಾ ಯೆಂಬ ವನೂ, ಸಾರಸ್ವತನಿಗಿ ಸೋಮವಂತನೆಂಬವನೂ ಹೀಗೆ ಇಬ್ಬರು ಮಕ್ಕಳಿ ದ್ದರು. ಇವರು ಸಮವಾದ ಬುದ್ಧಿಯುಳ್ಳವರೂ, ಒಂದೇ ವಯಸ್ಸಿನವರೂ, ಸಮವಾಗಿ ಮೀಮಾಂಸೆ, ತರ್ಕ, ಜ್ಯೋತಿಷ್ಯ, ವ್ಯಾಕರಣ, ವೇದವೇದಾಂತಗ ಳಲ್ಲಿ ಪಾರಂಗತರೂ ಆಗಿದ್ದರು. ಈರ್ವರಿಗೂ ಹದಿನಾರುವರ್ಷಗಳಾಗಲು ಪಿತ ರಾದ ವಿಪ್ರದ್ವಯರು, "ಬಾಲಕರೆ! ನೀವು ಯೌವನಕ್ಕೆ ಪ್ರಾಪ್ತರಾದಿರಿ. ಕಾರಣ ನೀವು ನಿಮ್ಮ ವಿದ್ಯಾಪ್ರಭಾವವನ್ನು ವಿದರ್ಭೇಶನೆಪುರಿಗೆ ತೋರಿಸಿ ಅವನಿಂದ ದ್ರವ್ಯವನ್ನು ಸಂಪಾದಿಸಿ ವಿವಾಹಮಾಡಿಕೊಳ್ಳಿರಿ" ಎಂದು ಹೇಳಿದನು.

ತಂದೆಯ ಹೇಳಿಕೆಯಂತೆ ಆ ವಿಪ್ರಕುಮಾರರು ರಾಜನೆಡೆಗೆ ಬಂದು ತಮ್ಮ ವಿದ್ಯೆಯಿಂದ ಭೂಪತಿಯ ಮನವನ್ನು ಸಂತೋಷಪಡಿಸಿ, ವಿವಾಹಮಾಡಿಕೊಳ್ಳು ವದಕ್ಕೆ ಧನವನ್ನು ಯಾಚಿಸಲು ರಾಜನು ನಕ್ಕು, "ವಿಪ್ರಕುಮಾರೋತ್ತಮರೇ! ನಿಷಧರಾಜನ ಪತ್ನಿಯಾದ ಸೀಮಂತಿನಿಯು ಪ್ರತಿಸೋಮವಾರದಲ್ಲಿ ದಂಪತಿಗ ಳನ್ನು ಪೂಜಿಸಿ, ಹೇರಳ ದ್ರವ್ಯವನ್ನು ದಕ್ಷಿಣಾರ್ಥವಾಗಿ ಕೊಡುತ್ತಿರುವಳು. ಕಾರಣ ನೀವೀರ್ವರೊಳಗೆ ಓರ್ವನು ಸ್ತ್ರೀವೇಷವನ್ನು ಧರಿಸಿ ದಂಪತಿಗಳಾಗಿ ಅವಳ ಹತ್ತಿರ ಹೋಗಿ ವಿಶೇಷ ದ್ರವ್ಯವನ್ನು ಪಡೆಯಿರಿ. ಅನಂತರ ನನ್ನ ಹತ್ತಿರ ಬಂದರೆ ನಾನಾದರೂ ಸಾಕಷ್ಟು ದ್ರವ್ಯವನ್ನು ಕೊಡುವೆನು" ಎಂದು ಪೇಳಲಾಗಿ ಆ ದ್ವಿಜ-ತನಯರು, "ರಾಜನ್! ದೇವತೆಗಳಲ್ಲಿಯೂ, ಗುರುಗಳಲ್ಲಿಯೂ, ಮಾತಾ-ಪಿತೃಗಳಲ್ಲಿಯೂ, ರಾಜಕುಲಗಳಲ್ಲಿಯೂ, ಕಪಟ ಮಾಡಿದರೆ ಈಗಲೇ ನಾಶವಾಗುವೆನೆಂಬ ಧರ್ಮವಾಕ್ಯವನ್ನು ಅರಿಯದಿರುವಿಯೊ? ಸ್ತ್ರೀ ವೇಷಧರಿಸಿದ ಪುರುಷನನ್ನು ನೋಡಿದರೆ ಸಚೈಲ ಸ್ನಾನಮಾಡಬೇಕೆಂದೂ, ಸ್ತ್ರೀ ವೇಷ ಧರಿಸುವವನು ಜನ್ಮ ಜನ್ಮಗಳಲ್ಲಿ ಸ್ತ್ರೀಯಾಗಿಯೇ ಉತ್ಪನ್ನನಾಗುವ ನೆಂದೂ ನಿಯಮಿತಿ ಇರುವದಿಲ್ಲವೇ? ಕಪಟಮಾಡುವ ಮನುಜರಲ್ಲಿ ಪಾಪ, ಭಯ, ವೈರತ್ವ, ನಿಂದೆಗಳು ವಾಸಮಾಡುವದಿಲ್ಲವೇ? ಸಕಲ ವಿಚಾರಜ್ಞನಾದ

ವಲ್ಲ! ಕಾರಣ ಊರಿಗೆ ಹೋದಮೇಲೆ ವಿಧಿಪೂರ್ವಕವಾಗಿ ನಿನ್ನನ್ನೇ ವಿವಾಹ ಮಾಡಿಕೊಳ್ಳುವೆನು, " ಎಂದು ಅನೇಕ ವಿಧವಾಗಿ ಬೋಧಮಾಡಿ ಅವಳನ್ನು ಕರೆದುಕೊಂಡು ಸ್ವಪುರವನ್ನು ಪ್ರವೇಶಮಾಡಿ ಸೋಮವಂತನ ತಂದೆಯಾದ ಸಾರಸ್ವತನಿಗೆ ನಡೆದ ಎಲ್ಲ ವರ್ತಮಾನವನ್ನು ತಿಳಿಸಿದನು.

ಸಾರಸ್ವತನು ತನ್ನ ಮಗನಿಗೆ ಸ್ತ್ರೀತ್ವವು ಬಂದದ್ದನ್ನು ನೋಡಿ ಪರಿಪರಿ ಯಿಂದ ದುಃಖಿಸುತ್ತಾ, ತನ್ನ ಮಗನೊಂದಿಗೆ ವಿದರ್ಭೇಶನ ಹತ್ತರಬಂದು ಅವನಿಗೆ ಅಹಸ್ಯ ವಾಕ್ಯಗಳನ್ನು ನುಡಿಯಲಾರಂಭಿಸಿದನು, ' ಮೂರ್ಖನೇ! ನನ್ನ ಮಗನು ದ್ರವ್ಯಾರ್ಥಿಯಾಗಿ ಬಂದರೆ ಈ ಪಾಡನ್ನು ಮಾಡಿಸಿದಿಯಾ? ಎಲಾ! ನಿನ್ನಿಂದಲೇ ನನ್ನ ವಂಶವು ಹಾಳಾಯಿತು!! ಮೂರ್ಖಾ! ಸದ್ಯಕ್ಕೆ ನನ್ನ ಪುತ್ರನ ಸ್ತ್ರೀತ್ವವನ್ನು ಹೋಗಲಾಡಿಸಿದರೆ ಉತ್ತಮವಾಯಿತು. ಇಲ್ಲದಿದ್ದರೆ ನಿನ್ನೆದುರಿನ ಲ್ಲಿಯೇ ತಲೆಯನ್ನು ಒಡೆದುಕೊಂಡು ಪ್ರಾಣವನ್ನು ಬಿಡುವೆನು," ಎಂದು ವಿಪ್ರನು ಆಕ್ರೋಶ ಮಾಡಲಾಗಿ ರಾಜನು ಏನೂ ತೋಚದೆ ಸುಮ್ಮನೆ ಕುಳಿತು, ಆಹಾ ನಾನು ಏನು ಮಾಡಿದೆ! ಇದೇನಾಯಿತು!! ಶ್ರೀಶಂಕರನೆದುರಿನಲ್ಲಿ ಕಪ ಟತನ ಮಾಡಿದ್ದರಿಂದ ಈ ಹಾಡಾಯಿತಲ್ಲವೇ!!! ಆ ಸೀಮಂತಿನಿಯ ಭಕ್ತಿ ಯಾದರೂ ಹೇಗೆ ಇರಬಹುದು! ಸಧ್ಯಕ್ಕೆ ಈ ವಿಪ್ರನು ಪ್ರಾಣವನ್ನು ಬಿಡುವವ ನಲ್ಲ!! ಇನ್ನೇನು ಮಾಡಲಿಯೆಂದು ನಾನಾಪ್ರಕಾರ ತರ್ಕಗಳನ್ನು ಮಾಡಿ ಪಟ್ಟ ಣದಲ್ಲಿರುವ ಯಾವತ್ತೂ ಬ್ರಾಹ್ಮಣರನ್ನು ಸಭಾ ಮಂಟಪಕ್ಕೆ ಕರಿಸಿ ರಾಜನು ಕೈಜೋಡಿಸಿ, " ವಿಪ್ರೋತ್ತಮರೇ! ಈ ಸೋಮವಂತನಿಗೆ ಸ್ತ್ರೀತ್ವವು ಬಂದಿರು ವದು, ಕಾರಣ ನೀವೇ ತಪಸ್ಸುಮಾಡಿ ಇವನಿಗೆ ಪುಂಸತ್ವವನ್ನು ತರಿಸಿಕೊಟ್ಟರೆ ನನ್ನಮೇಲೆ ಮಹದುಪಕಾರವಾಗುವದು". ಎಂದು ಬೇಡಿಕೊಳ್ಳಲಾಗಿ ಸರ್ವ ವಿಪ್ರರು, " ರಾಜನೇ! ಇವನಿಗೆ ದೇವಿಯ ಆವ್ಹಾನವಾದ್ದರಿಂದ ಇವನ ಸ್ತ್ರೀತ್ವ ವನ್ನು ಕಳೆಯುವದು ಅಸಾಧ್ಯವು ನೀನೇ ಬೇಕಾದರೆ ತಪಸ್ಸು ಮಾಡು," ಎಂದು ಹೇಳಲಾಗಿ ರಾಜನು ವಿಪ್ರರ ವಚನದ ಮೇರೆಗೆ ದೇವಿಯ ದೇವಾಲಯಕ್ಕೆ ಗಮನ ಮಾಡಿ ಏಳುದಿವಸ ಪರ್ಯಂತರವಾಗಿಯೂ ನಿರಾಹಾರದಿಂದ ದೇವಿಯನ್ನು ಸ್ತೋತ್ರ ಮಾಡಹತ್ತಲು ದೇವಿಯು ರಾಜನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷವಾಗಿ ಬಂದು, " ಭೂಪತಿಯೇ! ಯಾವ ವರವನ್ನು ಬೇಡುತ್ತೀ ಬೇಡು," ಎಂದು ಕೇಳಲಾಗಿ ವಿದರ್ಭೇಶನು ಅಂಬಿಕೆಗೆ ಸಾಷ್ಟಾಂಗವೆರಗಿ, " ದೇವೀ! ನನಗೆ ಏನೂ ಬೇಕಾಗಿಲ್ಲ. ಆದರೆ, ಸಾರಸ್ವತನ ಪುತ್ರನಾದ ಸೋಮವಂತನು ಸ್ತ್ರೀತ್ವಹೊಂದಿ ರುವನು, ಕಾರಣ ಅವನಿಗೆ ಪುರುಷತ್ವವನ್ನು ಕೊಡಬೇಕು, ಎಂದು ಬೇಡಿಕೊಳ್ಳ ಲಾಗಿ ಕಾಳಿಯು " ರಾಜನೆ! ಈ ಕೆಲಸವು ಮಾತ್ರ ಆಗದು. ಮಹಾ ಭಕ್ತಾ ಗ್ರೇಸರಳಾದ ಸೀಮಂತಿನಿಯಿಂದ ಪ್ರದಾನಮಾಡಲ್ಪಟ್ಟ ಸ್ತ್ರೀತ್ವವು ಯಾರಿಂದಲೂ ಹೋಗಲರಿಯದು. ಅದ್ದರಿಂದ ಆ ಸ್ತ್ರೀಯಾದ ಪುರುಷನನ್ನು, ಸುಮೇಧನಿಗೆ ಕೊಟ್ಟು, ವಿವಾಹ ಮಾಡು. ಆ ಸಾರಸ್ವತನಿಗೆ ನನ್ನ ಅನುಗ್ರಹದಿಂದ ಇನ್ನೋರ್ವ

ಪುತ್ರನು ಜನಿಸುವನು. " ಎಂದುಹೇಳಿ ಅದೃಶ್ಯವಾಗಲು, ದೇವಿಯ ವಾಕ್ಯಗಳನ್ನು ರಾಜನು ಎಲ್ಲರಿಗೂ ಹೇಳಿ ಆ ಸ್ತ್ರೀಯನ್ನು ಸುಮೇಧನಿಗೆ ವಿವಾಹಮಾಡಿದನು. ಕೆಲವು ಕಾಲವಾದ ಬಳಿಕ ಸಾರಸ್ವತನಿಗೆ ದೇವಿಯ ಅನುಗ್ರಹದಿಂದ ಪುತ್ರೋತ್ಪನ್ನ ಪುತ್ರನು ಜನಿಸಿದನು ಸೀಮಂತಿನಿಯಿಂದ ಮಾಡಲ್ಪಟ್ಟ ಕೃತ್ಯವು ಪಾರ್ವತಿಯಿಂದಕೂಡ ತಿಗೆಯುವದಾಗಲಿಲ್ಲ. ಶಿವಭಕ್ತರ ಮಹಿಮೆಯು ಅಗಾಧವಾದುದಲ್ಲವೇ ?

---

## —•— ಭದ್ರಾಯುವಿನ ಕಥೆ. —•—

ಪೂರ್ವದಲ್ಲಿ ಅವಂತಿ ಯೆಂಬ ನಗರದಲ್ಲಿ ಮದನನೆಂಬ ಬ್ರಾಹ್ಮಣನು ಇರುತ್ತಿದ್ದನು. ಅವನು ಅಲ್ಲಿರ್ದ ಪಿಂಗಲಾ ಯೆಂಬ ವೇಶ್ಯಾಂಗನೆಯ ರೂಪ ಲಾವಣ್ಯಾದಿಗಳಿಗೆ ಬೆರಗಾಗಿ ಅವಳನ್ನು ಹೊಂದಿದನು. ಮತ್ತು ಅವಳಲ್ಲಿಯೇ ಕೇವಲ ಆಸಕ್ತನಾದ್ದರಿಂದ ಸ್ವಕೀಯ ಕರ್ಮಾಚರಣೆಗಳನ್ನೂ, ತಂದೆ-ತಾಯಿ ಬಂಧು-ಬಾಂಧವರೆಲ್ಲರನ್ನೂ ಮರೆತು, ಅವಳ ಗೃಹದಲ್ಲಿಯೇ ವಾಸಮಾಡಿ ಭೋಜನಾದಿ ಕರ್ಮಗಳನ್ನು ಅಲ್ಲಿಯೇ ಮಾಡಲಾರಂಭಿಸಿದನು. ಹೀಗಿರುತ್ತಿರಲಾಗಿ ಕೆಲವು ಕಾಲದಮೇಲೆ ತನ್ನನ್ನು ಸ್ಮರಿಸುವ ಭಕ್ತರ ಸಂಕಟವನ್ನು ಪರಿಹರಿಸಲಿಕ್ಕೆ ಶಂಕರ ರೂಪಿಯಾದ ಋಷಭನೆಂಬ ಮುನೀಶ್ವರನು ಅಕಸ್ಮಾತ್ತಾಗಿ ಈ ಪುಣ್ಯ ಸ್ತ್ರೀಯ ಗೃಹಕ್ಕೆ ಬಂದನು. ಋಷೀಶ್ವರನು ಬಂದದ್ದನ್ನು ಕಂಡು ಪಿಂಗಲಾ-ಮದನರು ಆತನಿಗೆ ಸಾಷ್ಟಾಂಗವೆರಗಿ ಉತ್ತಮ ಆಸನದಲ್ಲಿ ಕುಳ್ಳಿರಿಸಿ, ಷೋಡಶೋಪಚಾರಮಾಡಿ, ಪಂಚಪಕ್ವಾನ್ನಗಳಿಂದ ಭೋಜನ ಮಾಡಿಸಿ ಉತ್ತಮ ಪರ್ಯಂಕದಲ್ಲಿ ಮಲಗಿಸಿ, ಈರ್ವರೂ ಚರಣಸೇವೆಯನ್ನು ಮಾಡಹತ್ತಿದರು. ಮಧ್ಯರಾತ್ರಿ ಸಂಧಿಯಲ್ಲಿ ಏಕಾಏಕಿ ಮುನೀಶ್ವರನು ಅಂತರ್ಧಾನವಾದದ್ದನ್ನು ಕಂಡು ಈರ್ವರೂ ಪರಮೇಶ್ವರನು ನಮಗೆ ದರ್ಶನವಿತ್ತು ಹೋದನೆಂದ, ಸಂತೋಷಪಡೆದರೂ, ಕೆಲವು ದಿವಗಳಾದ ಬಳಿಕ ಪಿಂಗಲಾ ಮದನರು ಮರಣಹೊಂದಲು ಇವರಲ್ಲಿ ಎಷ್ಟು ಪಾಪವಿದ್ದಾಗ್ಯಾದರೂ ಮುನೀಶ್ವರನ ಪೂಜೆಯಿಂದ ದಗ್ಧನಾಗಿ ಮದನನು, ದಶಾರ್ಣವ ದೇಶಾಧಿಪನಾದ ವಜ್ರ-ಬಾಹುವಿನ ಪಟ್ಟಣದ ರಾಣಿಯಾದ ಸುಮತಿಯ ಉದರದಿಂದ ಹುಟ್ಟಿ, ಭದ್ರಾಯು ಎಂಬ ನಾಮ ಪಡೆದನು. ಪಿಂಗಲೆಯು ಸೀಮಂತಿನಿಯ ಮಗಳಾಗಿ ಜನಿಸಿ ಕೀರ್ತಿಮಾಲಿನಿ ಯೆಂಬ ನಾಮವನ್ನು ಪಡೆದಳು. ದಶಾರ್ಣವದೇಶದಲ್ಲಿ ಸುಮತಿಯ ಗರ್ಭದಲ್ಲಿ ಮದನನು ಬಂದಕೂಡಲೆ ಎಲ್ಲರಿಗೂ ಸಂತೋಷವಾಯಿತು. ಆದರೆ ಇವಳಿಗೆ ಸವತಿಯರು

ಬಹಳವಿದ್ದ ಕಾರಣ ಅವರಿಗೆ ಸಹನವಾಗದೆ ಕಡುತರವಾದ ವಿಷವನ್ನು ತಂದು ಆ ಅನ್ನದಲ್ಲಿ ಕೂಡಿಸಿ ಪೂರ್ಣ ಗರ್ಭಿಣಿಯಾದ ಸುಮತಿಗೆ ತಿನಿಸಿದರು. ಆ ದಾರುಣ ವಿಷದಿಂದ ಸುಮತಿಯು ಮರಣವನ್ನೇ ಪಡೆಯತಕ್ಕದ್ದು; ಆದರೆ ಪೂರ್ವ ಪುಣ್ಯ ಪ್ರಭಾವದಿಂದ ಅಸುವನ್ನೀಗದೆ ಆ ವಿಷವು ವ್ರಣರೂಪದಿಂದ ಶರೀರದಲ್ಲಿ ಪ್ರಕಟವಾಗಿ ಬಹಳೇ ಬಾಧೆಪಡಿಸಹತ್ತಿತು. ಅದೇ ಸಂಧಿಯಲ್ಲಿ ಸುಮತಿಯು ಪ್ರಸೂತಳಾದಳು. ಆ ಶಿಶುವಿಗಾದರೂ ವಿಷವು ವ್ರಣರೂಪದಿಂದ ಪ್ರಕಟವಾಯಿತು. ಆದರಿಂದ ಶಿಶುವು ದಿನಾಲೂ ಬಾಧೆಪಡುತ್ತಾ, ಮೈಯಿಂದ ಕೀವನ್ನೂ, ರಕ್ತವನ್ನೂ ಸುರಿಸುತ್ತಾ, ಯಾವಾಗಲೂ ರೋದಿಸಹತ್ತಿದ್ದರಿಂದ ರಾಜನು ಅನೇಕ ಪಂಡಿತ ವೈದ್ಯರನ್ನು ಕರೆಯಿಸಿ ಉಪಾಯಮಾಡಿಸಿದಾಗ್ಯೂ ಗುಣವಾಗಲಿಲ್ಲ. ನಂತರ ಭೂಪತಿಯು ಬಹಳೇ ಬೇಸರಗೊಂಡು ಸುಮತಿಯನ್ನೂ, ಬಾಲಕನನ್ನೂ ಒಂದು ರಥದಲ್ಲಿ ಕುಳ್ಳಿರಿಸಿ ಘೋರಾರಣ್ಯದಲ್ಲಿ ಬಿಡಿಸಿದನು.

ಅಲ್ಲಿ ಸುಮತಿಯು ಬಹಳೇ ಕಷ್ಟಪಡುತ್ತಾ, ಬಿಸಲಿನ ತಾಪದಿಂದ ಬಹಳ ಬಾಯಾರಿ ಅತ್ತಿತ್ತ ತಿರುಗುತ್ತಾ, ಎದ್ದು ನೆಲದಮೇಲೆ ನಡೆಯುದಂತಾಗಿ ಚರಣಗಳಿಂದ ರಕ್ತವನ್ನು ಸುರಿಯುತ್ತಾ, ವ್ರಣಗಳ ಬಾಧೆಯಿಂದ ಮೂರ್ಛೆಪಡೆಯುತ್ತಾ, ತನ್ನ ದುರ್ದೈವವನ್ನು ನಿಂದಿಸುತ್ತಾ, ಸಿಂಹಶಾರ್ದೂಲ ಮೊದಲಾದ ಭೀಕರ ಪ್ರಾಣಿಗಳ ಗರ್ಜನೆಯಿಂದ ಭೀತಿಗೊಳ್ಳುತ್ತಾ, "ಹಾ! ಶಂಕರಾ! ಕರುಣಾರ್ಣವಾ! ಎಂಥ ಸಂಕಟವನ್ನು ತಂದೊಡ್ಡಿದಿ!! ಎಂದು ದೈನ್ಯದಿಂದ ಶೋಕಿಸುತ್ತಿರುವಾಗ ಇವಳ ದುಃಖವನ್ನು ಕೇಳಿ, ವನಪಕ್ಷಿಗಳು ಸಹ ಸಂಕಟಪಟ್ಟವು. ಈ ಬಾಲಕನಿಗೆ ಬಿಸಿಲು ತಾಕಬಾರದೆಂದು ನವಿಲುಗಳು ತಮ್ಮ ಪಕ್ಕಗಳಿಂದ ಸೂರ್ಯನಿಗೆ ಅಡ್ಡಾಗಿ ಬಾಲಕನಮೇಲೆ ಹಿಡಿದವು; ಶುಕಗಳು ತಮ್ಮ ಚುಂಚುವಿನಿಂದ ಉತ್ತಮವಾದ ಮಧುರವನ್ನು ತಂದು ಶಿಶುವಿನ ಬಾಯಲ್ಲಿ ಬಿಟ್ಟವು; ಕೋಕಿಲೆಗಳು ಇವಳ ಸಂಕಟ ಪರಿಹಾರಕ್ಕೋಸ್ಕರ ಇಂಪಾದ ಗಾಯನ ಮಾಡಿದವು; ಎಲ್ಲ ಪಕ್ಷಿಗಳು ಅಂತರಿಕ್ಷದಲಿ ಬಂದು ತಮ್ಮ ಪಕ್ಕಗಳಿಂದ ನೆರಳು ಮಾಡಿದವು. ಇಂಥ ಸಂಕಟ ಸಮಯದಲ್ಲಿ ಸುದೈವದಿಂದ ಅಲ್ಲಿಯೇ ಓರ್ವ ವರ್ತಕನು ಬಂದನು. ಅವನ ಸಂಗಡ ಸುಮತಿಯು ತನ್ನ ಪುತ್ರನೊಂದಿಗೆ ವರ್ತಕನ ಪುರವನ್ನು ಸೇರಿ ಮಾರ್ಗದಲ್ಲಿ ತಿರುಗುತ್ತಿರಲು ಅಲ್ಲಿಯ ಅರಸನಾದ ಪದ್ಮಾಕರನೆಂಬ ಪುಣ್ಯಾತ್ಮನು ಸುಮತಿಯನ್ನು ಕಂಡು ತನ್ನ ಮನೆಗೆ ಕರೆಕಳುಹಿ ಅವಳ ಸಕಲ ವೃತ್ತಾಂತವನ್ನು ಕೇಳಿ ಮಹಾ ವ್ಯಾಕುಲಚಿತ್ತನಾಗಿ ಇವಳನ್ನು ತನ್ನ ಪುತ್ರಿಯೆಂದೇ ಭಾವಿಸಿ, ಬೇರೊಂದು ಮಂದಿರವನ್ನು ಕಟ್ಟಿಸಿ ಅಲ್ಲಿಯೇ ಇವಳನ್ನು ಇರಿಸಿ ವೈದ್ಯಚಿಕಿತ್ಸೆಯನ್ನು ನಡೆಯಿಸಿದನು. ಮತ್ತು ಪಥ್ಯ ವಗೈರೆ ಪದಾರ್ಥಗಳು ಕಾಲಕಾಲಕ್ಕೆ ಸರಿಯಾಗಿ ಬರುವಂತೆ ಚಾರರನ್ನು ನೇಮಿಸಿ ಸ್ವತಃ ತಾನು ಅವಳ ಮಂದಿರಕ್ಕೆ ದಿನಾಲು ಬಂದಾವರ್ತಿ ಹೋಗುತ್ತಾ, ಕ್ಷೇಮಸಮಾಚಾರಗ

ಳನ್ನು ವಿಚಾರಿಸುತ್ತಿದ್ದನು. ಎಷ್ಟು ಉಪಚಾರಗಳನ್ನು ಮಾಡಿದಾಗ್ಯೂ ತಮ್ಮ ವರ ರೋಗವು ದಿನದಿನಕ್ಕೆ ಹೆಚ್ಚುತ್ತ ನಡೆದದ್ದರಿಂದ ಸುಮತಿಯು ಪದ್ಮಾಕರನಿಗೆ, "ತಂದೆಯೇ ! ನಮಗೆ ನೀನು ಏನು ಮಾಡಿಸಿದರೂ ಮಗ್ನ ರೋಗವು ನಾಶವಾಗುವದಿಲ್ಲ ಶ್ರೀ ಶಂಕರನೇ ವೈದ್ಯರೂಪದಿಂದ ಬಂದು ಔಷಧ ಹಚ್ಚಿದರೆ ಹೋಗಬಹುದು." ಎಂದು ನುಡಿದಳು ಮುಂದೆ ಕೆಲವು ದಿನಗಳಲ್ಲಿ ಪ್ರಾಕ್ಕರ್ಮದಿಂದ ಆ ಹುಡುಗನು ವ್ರಣಬಾಧೆಯಿಂದ ಮೃತಪಟ್ಟನು. ಸುಮತಿಯು ಪುತ್ರಪ್ರೇಮದಿಂದ ಅತಿ ಶೋಕಮಾಡಹತ್ತಿದಳು. ಪದ್ಮಾಕರನೂ ಮತ್ತು ಪುರಜನರೂ ಎಷ್ಟು ಪರಿಯಿಂದ ಸಮಾಧಾನ ಹೇಳಿದರೂ ಸುಮತಿಯು ಕೇಳದೆ, "ಹಾ ಪುತ್ರ! ಹಾ ತನಯ !!" ಎಂದು ವಿಶೇಷ ಶೋಕಮಾಡುವ ಸಮಯದಲ್ಲಿ ದರಿದ್ರನ ಗೃಹಕ್ಕೆ ಕಾಮಧೇನುವು ಬಂದಂತೆ, ಅಕಸ್ಮಾತ್ತಾಗಿ ರುದ್ರಾಕ್ಷಮಾಲಾಧಾರನಾದ, ಭಸ್ಮೋದ್ಧೂಳಿತ ವಿಗ್ರಹನಾದ, ಜಟಾಮುಕುಟ ಶೋಭಿತನಾದ ದಂಡ ಕಮಂಡಲು ಧರಿಸಿದವನಾದ, ಸಾಂಬರೂಪಿ-ಋಷಭ ಮುನೀಶ್ವರನು ಸುಮತಿಯು ಗೃಹಕ್ಕೆ ಬರಲಾಗಿ ಪದ್ಮಾಕರನು ಬಹುನಮ್ರತೆಯಿಂದ ಷೋಡಶೋಪಚಾರ ಪೂಜೆಗೈದು ಯೋಗ್ಯಾಸನದಲ್ಲಿ ಕುಳ್ಳಿರಿಸಿದನು. ಅನಂತರದಲ್ಲಿ ಪುತ್ರಶೋಕದಿಂದ ತಪ್ತಳಾದ ಸುಮತಿಯು ಭಕ್ತಿಪೂರ್ವಕವಾಗಿ ಮುನೀಶ್ವರನಿಗೆ ನಮಿಸಲು ಮುನೀಶ್ವರನು ಇಂತೆಂದನು. .... .... ....

"ಎಲೈ ಪತಿವ್ರತೆಯೇ ! ಶೋಕವನ್ನು ಯಾಕೆ ಮಾಡುವೆ ? ಜನಿಸಿದವನು ಇಂದಿಲ್ಲದಿದ್ದರೆ ನೂರುವರ್ಷಕ್ಕಾದರೂ ಮರಣವನ್ನೇ ಪಡೆಯುವನು. ಪುತ್ರೀ ! ಜನನ ಮರಣಗಳು ಜೀವನಿಗೆ ಇಲ್ಲ; ದೇಹಕ್ಕೆ ಇವೆ. ಈ ದೇಹವು ಬೆಳೆಯುವದೂ, ನಾಶವಾಗುವದೂ ಫೇನದಂತೆ ತಿಳಿ. ಸತ್ವ-ರಜ-ತಮೋಗುಣಗಳಿಂದ ಯುಕ್ತವಾಗಿ, ನಿಜಕರ್ಮದಿಂದ ಸಂಚರಿಸಿ ಸ್ವಕರ್ಮಾನುಸಾರವಾಗಿ ಬಂಧನವುಂ ಪಡೆಯುವದು. ಮರಣವೆಂಬುವದು ಬ್ರಹ್ಮಾದಿಗಳಿಗೂ ಉಂಟು; ಅಂದಮೇಲೆ ಅನೇಕ ರೋಗಾದಿಗಳಿಂದ ಯುಕ್ತರಾದ ಮಾಯಾಪಾಶಬದ್ಧರಾದ ನರದೇಹಿಗಳ ಪಾಡೇನು ? ಈ ದೇಹವು ಕಾಲಕರ್ಮ ಗುಣಗಳಿಗೆ ಅನುಸರಿಸಿ ಪಂಚಭೂತಗಳಿಂದ ಉತ್ಪನ್ನವಾಗುವದು. ಪಂಡಿತರು ಜನಿಸಿದರೆ ಮೋದಪಡೆಯುವದಿಲ್ಲ; ಮೃತಪಟ್ಟರೆ ದುಃಖಹೊಂದುವದಿಲ್ಲ. ಕೆಲವರು ಬಾಲ್ಯದಲ್ಲಿ ಕೆಲವರು ಯೌವನದಲ್ಲಿ ಕೆಲವರು ವೃದ್ಧಾಪ್ಯದಲ್ಲಿ ತಮ್ಮ ತಮ್ಮ ಕರ್ಮಗಳಿಗೆ ಅನುಸರಿಸಿ ಮರಣಪಡೆಯುವರು ಸ್ವಪ್ನದಲ್ಲಿ ಕಂಡ ಧನದಂತೆಯೂ, ಗಂಧರ್ವ-ನಗರದಂತೆಯೂ, ಶಶಿ-ಶೃಂಗದಂತೆಯೂ ಈ ಜಗತ್ತು ಮಿಥ್ಯಾಸ್ಪದವೆಂದು ತಿಳಿ. ನಮ್ಮ ಅಜ್ಞಾನದಿಂದಲೆ ನಾನಾರೀತಿಯಾಗಿ ತೋರುವದು. ವತ್ಸೇ ! ಪೂರ್ವದಲ್ಲಿ ನೀನು ಯಾರ್ಯಾರಿಗೆ ಪುತ್ರಿಯಾದಿ; ಯಾರಿಗೆ ಹೆಂಡತಿಯಾದಿ; ಯಾರ್ಯಾರಿಗೆ ತಾಯಿಯಾದಿ, ಇದನ್ನು ತಿಳಿದಿರುವಿಯಾ ? ಕೀವು-ರಕ್ತ

ಮಾಂಸ-ತ್ವಚ-ಅಸ್ಥಿ ಮೊದಲಾದ ದುರ್ಗಂಧಗಳಿಂದ ವ್ಯಾಪ್ತವಾದ, ಮೃಗಜಲದಂತೆ ಅನಿತ್ಯವಾಗಿರುವ ಈ ದೇಹವನ್ನು ಕುರಿತು ಯಾಕೆ ಶೋಕಿಸುವಿ ? ತಪಸ್ಸಿನಿಂದಲೂ ವಿದ್ಯಾ ಮಂತ್ರೌಷಧ-ರಸಾಯನಗಳಿಂದಲೂ ಮರಣವನ್ನು ದಾಟುವದು ಯಾರಿಂದಲೂ ಆಗದು ಯಾವ ಮನುಷ್ಯನು ಅಪಾರವಾದ ಸಂಸಾರದಲ್ಲಿ ಮನವನ್ನಿಡದೆ ಸರ್ವಸಂಗ ಪರಿತ್ಯಾಗಮಾಡಿ, ಶ್ರೀ ಶಂಕರನ ನಾಮಾಮೃತವನ್ನು ಪಾನಮಾಡುವನೋ ಅವನೇ ಕಾಲರೂಪೀ-ವ್ಯಾಘ್ರನಿಂದ ಮುಕ್ತನಾಗುವನು. ಆದ್ದರಿಂದ ರಾಜಪತ್ನೀ ! ಸಕಲ ಶೋಕ-ಮೋಹಾದಿಗಳನ್ನು ತೊರೆ !! ಪಾರ್ವತೀಶನನ್ನು ಭಜಿಸು ! ಅಂದರೆ, ಸುಖಸಾಮ್ರಾಜ್ಯವನ್ನು ಪಡೆಯುವಿ !! " ಎಂದು ಬೋಧಿಸಲಾಗಿ ಸುಮತಿಯೂ, ಪದ್ಮಾಕರನೂ ಋಷಭಮುನೀಶನ ಚರಣಗಳಿಗೆರಗಿ, " ದೇವಾ ! ತಾವು ಶಂಕರ-ರೂಪರೇ ಇರುವಿರಿ. ತಮ್ಮ ಸಂಚಾರವು ಭಕ್ತರ ಸಂಕಟಗಳನ್ನು ಪರಿಹಾರ ಮಾಡುವದಕ್ಕೋಸ್ಕರವೇ ಇರುವದು. ತಮ್ಮ ಚಿತ್ತಕ್ಕೆ ತಿಳಿದಂತೆ ಮಾಡಬಹುದು " ಎನಲಾಗಿ ಕರುಣಾಸಾಂದ್ರನಾದ ಮುನೀಶನು ಸುಮತಿಗೆ ಮೃತ್ಯುಂಜಯ-ಮಂತ್ರವನ್ನು ಉಪದೇಶಿಸಿ ಶರೀರಕ್ಕೆ ಭಸ್ಮವನ್ನು ಲೇಪಿಸಲು. ಸುಮತಿಯು ಸಕಲ ದೋಷಗಳಿಂದ ಮುಕ್ತಳಾಗಿ ಚಂದ್ರನಂತೆ ಕಾಂತಿಯುಕ್ತಳಾದಳು ಆ ಮೇಲೆ ಪುನಃ ಋಷಭನು ಮೃತಪಟ್ಟ ಬಾಲಕನಿಗೆ ಮಂತ್ರಪೂತ ವಿಭೂತಿಯನ್ನು ಹಚ್ಚಲಾಗಿ ಹಸಳನು ಸರ್ವ ರೋಗಗಳಿಂದ ಮುಕ್ತನಾಗಿ ದಿವ್ಯಶರೀರವುಳ್ಳವನಾಗಿ ಎದ್ದು ಕೂತನು.

ಈ ಅದ್ಭುತ ಕರ್ಮವನ್ನು ಕಂಡು ಸರ್ವರೂ ಹರ್ಷಾಶ್ಚರ್ಯ ಭರಿತರಾದರು. ಸುಮತಿಯು ಬಾಲಕನನ್ನು ಅಪ್ಪಿ ಮುನಿಯ ಪಾದಗಳಮೇಲೆ ಹಾಕಿ, " ದೇವಾ ! ನಿಮ್ಮುಪಕಾರವನ್ನು ಎಷ್ಟು ಜನ್ಮಗಳಲ್ಲಿ ನೆನಿಸಿದರೂ ತೀರದು, " ಎಂದು ಸ್ತೋತ್ರಮಾಡಲಾಗಿ ಮುನಿಪನು, " ಸುದತಿಯೇ ! ಈ ಬಾಲಕನು ಮುಂದೆ ಘನವಾದ ಶೌರ್ಯದಿಂದ ಯುತನಾಗಿ ಪುನಃ ತನ್ನ ರಾಜ್ಯವನ್ನು ಹೊಂದುವನು. ಇವನು ತರುಣನಾಗುವವರೆಗೂ ಇಲ್ಲಿಯೇ ಇರಲಿ, ಇವನಿಗೆ ಭದ್ರಾಯುವೆಂಬ ನಾಮ ಬರಲಿ. ಈ ಗೌಪ್ಯವನ್ನು ಯಾರಿಗೂ ತಿಳಿಸಬೇಡ, " ಎಂದು ರಾಜತನಯನಿಗೆ ಕಲ್ಯಾಣಕರವಾದ ಆಶೀರ್ವಾದಮಾಡಿ ಅಲ್ಲಿಯೇ ಮಾಯವಾದನು ಸುಮತಿಯು ಪುತ್ರನಿಂದ ಕೂಡಿಕೊಂಡು ಪದ್ಮಾಕರನ ಗೃಹದಲ್ಲಿ ವಾಸಮಾಡಿದಳು. ಪದ್ಮಾಕರನು ತನ್ನ ಮಗನಾದ ಸುನಯನಗಿಂತಲೂ ಭದ್ರಾಯುವಿನಮೇಲೆ ವಿಶೇಷ ಪ್ರೀತಿಮಾಡುತ್ತ ಕೆಲವು ದಿನಗಳಾಗಲು ಮಹಾಸಮಾರಂಭದಿಂದ ಈರ್ವರಿಗೂ ಉಪನಯನ-ಕರ್ಮವನ್ನು ಮಾಡಿಸಿದನು. ನಂತರ ಈರ್ವರೂ ಗುರುಗಳಿಂದ ವೇದ-ವೇದಾಂತ-ಶಾಸ್ತ್ರ-ಉಪಶಾಸ್ತ್ರಗಳಲ್ಲಿ ಪ್ರವೀಣರಾಗಿ ಸುಮತಿಗೂ, ಪದ್ಮಾಕರನಿಗೂ ಸಂತೋಷಪಡಿಸುತ್ತಾ ಹನ್ನೆರಡುವರುಷದ

ವನಾಗಲು ಭದ್ರಾಯುವಿನ ಪುಣ್ಯಪ್ರಭಾವದಿಂದ ಶಿವಯೋಗಿಯಾದ ಋಷಭನು ಸುಮತಿಯ ಗೃಹಕ್ಕೆ ಬರಲಾಗಿ ಭದ್ರಾಯುವೂ ಸುಮತಿಯೂ ಕೂಡಿ ಷೋಡಶೋಪಚಾರ ಪೂಜೆಮಾಡಿ ಕೈಜೋಡಿಸಿ ನಿಮ್ಮಿಂದಲೆ ನಾವು ಉದ್ಧಾರಾದೆವೆಂದು ಪರಿಪರಿಯಿಂದ ಸ್ತವನ ಮಾಡಲು, ಮುನೀಶ್ವರರು ಭದ್ರಾಯುವಿಗೆ ನೀತಿ ಮಾರ್ಗವನ್ನು ಉಪದೇಶಿಸಿದನು.

ಏನಂದರೆ— ಬಾಲಕಾ! ಶೃತಿಸ್ಮೃತಿಗಳಲ್ಲಿ ಹೇಳಲ್ಪಟ್ಟ ಮಾರ್ಗದಿಂದ ಆಚರಿಸು. ಗೋ-ದೇವ-ಗುರು- ಮಾತಾ-ಪಿತರಲ್ಲಿ ಭಕ್ತಿಯನ್ನಿಡು. ಅನ್ನಾರ್ಥಿಯಾಗಿ ಚಂಡಾಲನು ಸಹ ಬಂದರೂ ಅನ್ನದಾನಮಾಡು. ಎಂಥ ಸಂಕಟ ಬಂದಾಗ್ಯಾದರೂ ಸತ್ಯವನ್ನು ಬಿಡಬೇಡ. ಗೋಬ್ರಾಹ್ಮಣ ರಕ್ಷಣಾರ್ಥವಾಗಿ ಸಮಯಾನುಸಾರ ಮಿಥ್ಯವನ್ನಾಚರಿಸಿದರೂ, ಸ್ನಾನ. ಜಪ-ತಪ, ಸಂಧ್ಯಾವಂದನೆ, ಪಿತೃ ತರ್ಪಣ, ಗೋ-ದೇವ, ಅತಿಥಿ, ಪೂಜೆಗಳಲ್ಲಿ ಆಲಸ್ಯಮಾಡಬೇಡ. ಕ್ರೋಧ, ದ್ವೇಷ, ಕಪಟ, ದಂಭ, ಅಸೂಯಾದಿಗಳನ್ನು ಯಾವಾಗಲೂ ಮಾಡಬೇಡ. ಬೇಟೆ ದ್ಯೂತ, ಸ್ತ್ರೀಯಾದಿಗಳಲ್ಲಿ ಅತ್ಯಾಸಕ್ತಿಯನ್ನು ಹೊಂದಬೇಡ. ಸುಶೀಲರಲ್ಲಿ ಮೈತ್ರಿಯನ್ನೂ, ದುಃಖಿಗಳಲ್ಲಿ ದಯವನ್ನೂ, ಪುಣ್ಯವಾನರಲ್ಲಿ ಸಂತೋಷವನ್ನೂ, ನೀಚರಲ್ಲಿ ಉದಾಸೀನತೆಯನ್ನೂ ಮಾಡು. ಅತಿ ಆಹಾರವನ್ನೂ ಅತಿಕೋಪವನ್ನೂ, ಅತಿ ನಿದ್ರೆಯನ್ನೂ, ಅತಿ ಶ್ರಮವನ್ನೂ, ಅತಿ ಚೇಷ್ಟೆಯನ್ನೂ. ಅತಿ ಕ್ರೀಡೆಯನ್ನೂ ಮಾಡಬೇಡ. ಅತಿ ವಿದ್ಯೆಯನ್ನೂ ಅತಿ ಶ್ರದ್ಧೆಯನ್ನೂ, ಅತಿ ಪುಣ್ಯವನ್ನೂ, ಅತಿ ಜ್ಞಾನವನ್ನೂ, ಅತಿ ಆನಂದವನ್ನೂ ಅತಿ ಖ್ಯಾತಿಯನ್ನೂ, ಅತಿ ಧೈರ್ಯವನ್ನೂ, ಸಾಧನಮಾಡು. ಕಾಮವನ್ನು ನಿಜಪತ್ನಿಯಲ್ಲಿಯೂ, ಕೋಪವನ್ನು ಶತ್ರುಗಳಲ್ಲಿಯೂ, ಲೋಭವನ್ನು ಪುಣ್ಯ ಕೆಲಸಗಳಲ್ಲಿಯೂ, ಅಸೂಯೆಯನ್ನು ಅಧರ್ಮಿಗಳಲ್ಲಿಯೂ, ದ್ವೇಷವನ್ನು ಪಾಖಂಡರಲ್ಲಿಯೂ, ಪ್ರೀತಿಯನ್ನು ಸಜ್ಜನರಲ್ಲಿಯೂ ಮಾಡು. ದುರ್ಮಂತ್ರಿಯಲ್ಲಿ ಮೂಕನೂ, ನೀಚರಲ್ಲಿ ಕಿವುಡನೂ ಆಗು ಪ್ರಥಮದಲ್ಲಿ ಆತ್ಮರಕ್ಷಣಾ ಕಾರ್ಯ ಮಾಡಿ ಉನ್ಮತ್ತನಾಗದೆ ಸದ್ವಿಚಾರದಿಂದಿರು. ಪತ್ನಿಯ, ಪತಿವ್ರತಾ ಸ್ತ್ರೀಯು, ತಾಯಿಯ, ಮಾವನ, ಸಜ್ಜನರ, ಗುರುವಿನ ವಚನಗಳಲ್ಲಿ ವಿಶ್ವಾಸವನ್ನಿಡು. ಅನಾಥರನ್ನೂ, ಕೃಪಣರನ್ನೂ, ವೃದ್ಧರನ್ನೂ, ಸ್ತ್ರೀಯರನ್ನೂ, ಬಾಲರನ್ನೂ, ಕೈಲಾದಮಟ್ಟಿಗೆ ಧನದಿಂದಲೂ, ಪ್ರಾಣದಿಂದಲೂ, ಶಕ್ತಿಯಿಂದಲೂ, ಬುದ್ಧಿಯಿಂದಲೂ ರಕ್ಷಣಮಾಡು. ವೈರಿಯಾದರೂ ಶರಣಾಗತನಾದರೆ ರಕ್ಷಿಸು. ಉತ್ತಮನೇ ಆಗಲಿ, ನೀಚನೇ ಆಗಲಿ, ಪಾತ್ರನೇ ಆಗಲಿ, ಅಪಾತ್ರನೇ ಆಗಲಿ, ಶಿರವನ್ನು ಬೇಡಿದರೆ ಸಹ ಕೊಡು. ಯಾವಾಗಲೂ ಯತ್ನದಿಂದ ಕೀರ್ತಿಪಡೆ. ತಾಯಿತಂದೆ ಗುರುಗಳ ಕೋಪವನ್ನೂ, ಪುತ್ರ ಬ್ರಾಹ್ಮಣರ ಅಪರಾಧಗಳನ್ನೂ ಕ್ಷಮಿಸು. ಹೇಗೆ ಬ್ರಾಹ್ಮಣರ ಅನುಗ್ರಹವಾಗುವದೋ ಹಾಗೆ ಅವರಿಗೆ ಹಿತವನ್ನು ಮಾಡು. ಆಯುಷ್ಯವೂ, ಶಕ್ತಿಯೂ ಕೀರ್ತಿಯೂ, ಸೌಖ್ಯವೂ, ಧನವೂ, ಪುಣ್ಯವೂ, ಪ್ರಜಾಹಿತವೂ, ಯಾವ ಕರ್ಮ

ದಿಂದ ಆಗುವದೋ ಅದನ್ನೇ ಆಚರಿಸು ದೇಶ-ಕಾಲ ಪರಿಸ್ಥಿತಿಗಳನ್ನು ವಿಚಾರಿಸಿ ಕಾರ್ಯವನ್ನು ಮಾಡು. ನಿದ್ರೆಯಲ್ಲಿ ತ್ವರೆಯನ್ನು ಮಾಡಬೇಡ. ಭೋಜನದಲ್ಲಿ ಆಲಸ್ಯಮಾಡಬೇಡ. ನಿಂದೆಮಾಡುವವರನ್ನೂ, ಶಿವಭಕ್ತಿಯಿಲ್ಲದವರನ್ನೂ ಕೃತಘ್ನ ಮೊದಲಾದವರನ್ನೂ ಕಣ್ಣಿಂದ ಸಹ ನೋಡಬೇಡ ಆಯುಷ್ಯವನ್ನೂ, ಗೃಹಛಿದ್ರವನ್ನೂ, ಪುಣ್ಯವನ್ನೂ, ದಾನವನ್ನೂ, ಮಾನಾಪಮಾನಗಳನ್ನೂ ಪರರಿಗೆ ತಿಳುಹಬೇಡ. ಮಸ್ತಕದಲ್ಲಿ ರುದ್ರಾಕ್ಷಮಾಲೆಯನ್ನೂ; ಹಣೆಯಲ್ಲಿ ಭಸ್ಮವನ್ನೂ ಧಾರಣಮಾಡು.

ಈ ಪ್ರಕಾರವಾಗಿ ಋಷಭ ಮುನಿಯು ನೀತಿಯನ್ನು ಹೇಳಿ ನಂತರ ಭದ್ರಾಯುವಿಗೆ ಶಿವ-ಕವಚವನ್ನುಪದೇಶಿಸಿ ಇದರಿಂದ ನಿನಗೆ ಯಾವ ಭಯವೂ ಆಗಲರಿಯದೆಂದು ಹೇಳಿ, ಮಹಾ ಪರ್ವ, ಗ್ರಹಣ, ಶ್ರಾದ್ಧ, ವ್ಯತಿಪಾತಗಳಲ್ಲಿ ಸ್ತ್ರೀಯನ್ನು ಭೋಗಿಸಬಾರದು ಸೋಮವಾರ, ಶಿವರಾತ್ರಿ, ಪ್ರದೋಷ ಮೊದಲಾದ ತಿಥಿಗಳಲ್ಲಿ ಉಪೋಷಣೆ ಮಾಡಿ ಶಿವ ಕೀರ್ತನೆ ಮಾಡಬೇಕು. ಗ್ರಹಣಕಾಲದಲ್ಲಿ ಭೋಜನ ಮಾಡಬಾರದು. ವಿಪ್ರರಲ್ಲಿ ದ್ವೇಷಮಾಡದೆ ಯಾವಾಗಲೂ ಸತ್ಯ ಮಾರ್ಗದಂತೆ ವರ್ತಿಸು. ಸಕಲ ಪ್ರಜರನ್ನು ಪುತ್ರರಂತೆ ಪಾಲಿಸು. ದ್ರವ್ಯ, ವಿದ್ಯಾ, ಸ್ತ್ರೀ, ರೂಪಮೊದಲಾದ ಎಂಟುಮದಗಳಿಂದ ಯುಕ್ತನಾಗಬೇಡ. ಮಹಾಪುರುಷರಲ್ಲಿ ವಿರೋಧವನ್ನೂ, ಬಲಿಷ್ಠರಲ್ಲಿ ದ್ವೇಷವನ್ನೂ ಮಾಡಬೇಡ. ಯುದ್ಧದಲ್ಲಿ ಪರಾಕ್ರಮವನ್ನೂ, ಆಪತ್ತಿನಲ್ಲಿ ಧೈರ್ಯವನ್ನೂ ಗ್ರಹಣ ಮಾಡು. ಕುಪಾತ್ರರಲ್ಲಿ ದಾನಕೊಡುವದರಿಂದ ದುಃಖವೂ, ಸತ್ಪಾತ್ರರಲ್ಲಿ ಪುಣ್ಯವೂ ಬರುವದು. ಗುರು-ಶಂಕರರಲ್ಲಿ ಭೇದ ತಿಳಿಯಬೇಡ. ಮುಖ್ಯವಾಗಿ ಯಾವಕಾಲದಲ್ಲಿ ಯಾದರೂ ಗರ್ವವನ್ನು ಪಡೆಯದೆ ಶ್ರೀಸಾಂಬನ ಸ್ಮರಣೆಯನ್ನು ಮರೆಯದೆ ಗುರು-ಹಿರಿಯರಲ್ಲಿ ಶಠತ್ವ ಮಾಡದೆ, ದುರ್ಜನರ ಸಂಗಡ ಸಂಗಬೆಳಿಸದೆ ಯಾವಾಗಲೂ ಆನಂದದಿಂದ ವಾಸಮಾಡೆಂದು ಋಷಭ ಮುನೀಶ್ವರನು ನೀತಿಯನ್ನು ಬೋಧಿಸಿದನು.

**ಏಳನೆಯ ಅಧ್ಯಾಯ ಸಂಪೂರ್ಣವಾದುದು.**



# ಎಂಟನೇ ಅಧ್ಯಾಯ ಪ್ರಾರಂಭವು.

## ::: ಭದ್ರಾಯು ರಾಜನ ಕಥೆ. :::

ಆ ಮೇಲೆ ಋಷಭ ಮುನೀಶ್ವರನಿಂದ ಶಿವಕವಚವನ್ನು ಗ್ರಹಣಮಾಡಿ ಅದರಂತೆಯೇ ರುದ್ರಾಕ್ಷಿ-ಭಸ್ಮ ಮೊದಲಾದವುಗಳನ್ನು ಧರಿಸಿದನು. ನಂತರದಲ್ಲಿ ಶಿವಯೋಗಿಯು ಭದ್ರಾಯುವಿಗೆ ಯಾವುದರ ನಾದ-ಶ್ರವಣದಿಂದ ಎಲ್ಲ ಶತ್ರು

ಗಳೂ ಮೂರ್ಛೆಹೊಂದಬೇಕೋ ಅಂಥ ಒಂದು ಶಂಖವನ್ನು ಕೊಟ್ಟನು. ಮತ್ತು ಯಾವುದರ ತೇಜವನ್ನು ನೋಡಿದಕೂಡಲೇ ವೈರಿಗಳು ಪ್ರಾಣಗಳನ್ನೇ ಬಿಡಬೇಕೋ ಅಂಥ ಶಿವದತ್ತ ಎಂಬ ಶಸ್ತ್ರವನ್ನು ಕೊಟ್ಟನು. ಅದಲ್ಲದೆ ಹತ್ತು ಸಹಸ್ರ ಆನೆಗಳ ಬಲವನ್ನು ಕೊಟ್ಟು ವಿಜಯಶೀಲನಾಗೆಂದು ಆಶೀರ್ವದಿಸಿ ಅಂತರ್ಧಾನನಾದನು. ನಂತರ ಸುಮತಿಯೂ, ಭದ್ರಾಯುವೂ ಯಾವಾಗಲೂ ಶಿವಚರಣಗಳನ್ನು ಧ್ಯಾನಿಸುತ್ತ ಮಹಾಶೈವರಾಗಿದ್ದರು. ಕೆಲವು ದಿನಗಳಾದ ನಂತರ ಭದ್ರಾಯುವು, ತನ್ನ ತಂದೆಯಾದ ಶಾರ್ಣವದೇಶಾಧಿಪನಾದ ವಜ್ರಬಾಹು ರಾಜನನ್ನು ಮಗಧಾಧಿಪನಾದ ಹೇಮರಥನು ಯುದ್ಧದಲ್ಲಿ ಜಯಿಸಿದನೆಂದೂ. ನಗರದಲ್ಲಿರುವ ಸ್ತ್ರೀಯರನ್ನು ಸೆರೆಯಲ್ಲಿ ಹಾಕಿರುವನೆಂದೂ ವಜ್ರಬಾಹುವನ್ನು ರಥಕ್ಕೆ ಕಟ್ಟಿ ಯಾವತ್ತೂ ಪ್ರಧಾನರಿಗೆ ಸಂಕೋಲೆಗಳನ್ನು ಹಾಕಿ ತನ್ನ ಪಟ್ಟಣಕ್ಕೆ ತೆರಳಿದನೆಂದೂ, ವಜ್ರಬಾಹುವು ತನ್ನ ಸೆರೆಯನ್ನು ಬಿಡಿಸುವವರು ಯಾರೂ ಇಲ್ಲವೆಂದು ಮಹಾದುಃಖದಲ್ಲಿರುವನೆಂದೂ, ಅಂತಃಪುರದ ಸ್ತ್ರೀಯರು ಚಿಂತಾಸಾಗರದತ ಮುಳುಗಿರುವರೆಂದೂ, ಜನರ ಮುಖದಿಂದ ತಿಳಿದು ತನ್ನ ತಾಯಿಯಾದ ಸುಮತಿಯ ಹತ್ತರಬಂದು ಸಾಷ್ಟಾಂಗವೆರಗಿ, "ಮಾತೇ! ಪಿತನನ್ನು ಶತ್ರುವು ಯುದ್ಧದಲ್ಲಿ ಗೆದ್ದು ತನ್ನ ನಗರಕ್ಕೆ ಒಯ್ಯುವನೆಂಬ ವಾರ್ತೆ ಬಂದಿರುವದು. ಕಾರಣ ನನಗೆ ಅಪ್ಪಣೆಕೊಡು. ಅಂದರೆ ಅರನಿಮಿಷದಲ್ಲಿಯೇ ಆ ವೈರಿಯನ್ನು ಸೋಲಿಸಿ, ತಂದೆಯ ಕಷ್ಟವನ್ನು ಬಿಡಿಸುವೆನು. ನನ್ನ ಮನಕ್ಕೆ ನಿರ್ಬಂಧ ಮಾತ್ರ ಮಾಡಬೇಡ. ಯಾಕಂದರೆ ನಿನ್ನ ಅನುಗ್ರಹವೊಂದಿದ್ದರೆ ಸಾಕು. ಇದೇ ಶಸ್ತ್ರದಿಂದ ಕುಲ-ಪರ್ವತಗಳನ್ನು ಭೇದಿಸಿ ಆಕಾಶ ಮಾರ್ಗದಲ್ಲಿ ಹಾರಿಸೇನು! ದಿಗ್ಗಜಗಳನ್ನು ಸ್ಥಳಬಿಟ್ಟು ಪಲಾಯನ ಮಾಡಿಸೇನು!! ಅಂದಮೇಲೆ ಆ ಕ್ಷುಲ್ಲಕ ಶತ್ರುಗಳಿಂದ ನನಗೆ ಆಗುವದೇನು? ದಯಮಾಡಿ ಅಪ್ಪಣೆಕೊಡು," ಎಂದು ಬೆಸಗೊಳ್ಳಲಾಗಿ ಸುಮತಿಯು ತನಯನ ಮಾತಿಗೆ ಆನಂದಪಟ್ಟು "ಪುತ್ರಾ! ಸಮರಕ್ಕೆ ಹೋಗಿ ವಿಜಯಹೊಂದಿ ಬಾ," ಎಂದು ಆಶೀರ್ವದಿಸಿ ಕಳುಹಲು, ಭದ್ರಾಯುವು ಶಿವಕವಚದಿಂದ ಅಂಗ-ರಕ್ಷಣೆ ಮಾಡಿಕೊಂಡು, ಶಂಖವನ್ನೂ, ಶಸ್ತ್ರವನ್ನೂ ಧರಿಸಿ, ತನ್ನ ಸಂಗಡ ಪದ್ಮಾಕರನ ಪುತ್ರನಾದ ಸುನಯನನನ್ನು ಕರೆದುಕೊಂಡು ಸಿಂಹನಾದ ಮಾಡುತ್ತ ಶತ್ರುಗಳಿಗೆದುರಾಗಿ ಹೊರಟನು.

ಕೆಲವು ವೇಳೆಯಲ್ಲಿ ಈರ್ವರೂ ವೈರಿಗಳ ಸೈನ್ಯದ ಬಳಿಗೆ ಬಂದು ಹಾಸ್ಯದಿಂದ "ಎಲೈ ಚೋರರೇ! ವಜ್ರಬಾಹುವನ್ನು ಕದ್ದುಕೊಂಡು ಎತ್ತ ಹೋಗುವಿರಿ. ನಿಲ್ಲಿರಿ! ನಿಲ್ಲಿರಿ!! ಆಯುಷ್ಯ ರೇಖೆಯು ಅಳಿಯುವ ಕಾಲವು ಒದಗಿತು." ಎಂದು ಕೂಗಲು, ಸೈನಿಕರು ಈ ಗರ್ಜನೆಯನ್ನು ಕೇಳಿ ಧೈರ್ಯಗುಂದಿ ಅತ್ತಿತ್ತ ನೋಡುತ್ತಾ, ಎದುರಿಗೆ ಬರುವ ಶಸ್ತ್ರಪಾಣಿಗಳಾದ, ಹರಿಹರರಂತೆ ತೋರುವ ತರುಣರನ್ನು ನೋಡಿ ಇವರು ಯಾರಾಗಿರಬಹುದೆಂದು ಆಲೋಚನೆ ಮಾಡು

ವಷ್ಟರಲ್ಲಿಯೇ ಈರ್ವರೂ ಜಲಧಾರೆಗಳಂತೆ ಶರವೃಷ್ಟಿಯನ್ನು ಮಾಡಲು ಮಾಗಧರು ಖತಿಗೊಂಡು ಶಸ್ತ್ರಗಳನ್ನು ಪ್ರಯೋಗಿಸಿದರು. ಈರ್ವರಿಗೂ ತುಮುಲ-ಯುದ್ಧ ಜರಗಿತು. ರಕ್ತದ ಕಾಲುವೆ ಹರಿಯಹತ್ತಿತು. ರಣವೆಂಬ ನದಿಯಲ್ಲಿ ರುಂಡಗಳೇ ಕಮಲಗಳಾದವು; ಬಾಹುಗಳೇ ಮೀನಗಳಾದವು. ಎಷ್ಟೋ ಅತಿರಥ-ಮಹಾರಥರು, ಸಿಡ್ಲುಬಡೆದಂತೆ ಭದ್ರಾಯು ಮತ್ತು ಸುನಯರ ಬಾಣ ಪ್ರಹಾರದಿಂದ ಭೂಮಿಯಲ್ಲಿ ಶಯನಮಾಡಿದ್ದರಿಂದ ರಣರಂಗದಲ್ಲಿ ಅನೇಕ ರಥಗಳು ಅನಾಯಕಗಳಾಗಿ ತಿರುಗುತ್ತಿದ್ದದರಿಂದ ಭದ್ರಾಯುಸುನಯರು ಎರಡುರಥಗಳನ್ನು ತೆಗೆದುಕೊಂಡು ಅದರಲ್ಲಿ ಕುಳಿತು ಸಮರ ಕರ್ಮವನ್ನು ನಡೆಸಿದರು. ಇದನ್ನು ಕಂಡು ವಜ್ರಬಾಹುವಿನ ಪಕ್ಷದವರು ತಮಗೋಸುಗ ಯುದ್ಧಮಾಡುತ್ತಾರೆಂದು ಇವರ ಸಹಾಯಾರ್ಥವಾಗಿ ಅನೇಕ ಸೈನಿಕರು ಬಂದರು. ನಂತರ ಮಗಧ ದೇಶಾಧಿಪನು ಈ ಹುಡುಗರು ತಮ್ಮ ಸೈನ್ಯವನ್ನು ನಾಶಮಾಡಿದರೆಂದು ಮಹಾ ಕೋಪವನ್ನು ತಾಳಿ ಕೃತಾಂತನಂತೆ ಕಡು ಕಾಳಗಕ್ಕೆ ಸಿದ್ಧನಾಗಲು, ಈರ್ವರಿಗೂ ಮಹತ್ವವಾದ ಕದನವಾಯಿತು.

ಈ ಕಾಳಗದಿಂದ ಭೂದೇವಿಯು ನಡುಗಿದಳು, ನಕ್ಷತ್ರಗಳು ಪತನವಾದವು; ದಿಗ್ಗಜಗಳು ಸ್ಥಳಬಿಟ್ಟವು; ಆದಿಶೇಷನು ಕಂಪಿಸಿದನು. ನಂತರದಲ್ಲಿ ಭದ್ರಾಯುವು ವೈರಿಯ ಅಬ್ಬರವನ್ನು ಕಂಡು ಶಿವದತ್ತ ಶಂಖನಾದವನ್ನು ಮಾಡಿದನು. ಆ ಶಬ್ದವನ್ನು ಕೇಳಲಾರದೆ ಸಕಲ ರಿಪುಗಳು ಭೂಮಿಯಲ್ಲಿ ಶಯನಮಾಡಿದರು. ಇದನ್ನು ಕಂಡು ಶತ್ರುವಾದ ಹೇಮರಥನು ತನ್ನ ಪಧಾನರೊಂದಿಗೆ ವಜ್ರಬಾಹುವನ್ನು ಬೆಂಬಟ್ಟಿ ಅವನನ್ನು ಹಿಡಿದು ಚನ್ನಾಗಿ ತಾಡನಮಾಡುತ್ತ ತಂದೆಯು ಹತ್ತರ ತೆಗೆದುಕೊಂಡು ಬಂದು, ತಂದೆಯ ಬಂಧನವನ್ನು ಬಿಡಿಸಿ ಶತ್ರುವಿಗೆ ಸಂಕೋಲೆಗಳನ್ನು ಹಾಕಿ ಎದುರಿಗೆ ನಿಲ್ಲಿಸಿ ತಾನು ವಜ್ರಬಾಹುವಿಗೆ ನಮಸ್ಕರಿಸಲು, ವಜ್ರಬಾಹುವು ಪರಮಾನಂದದಿಂದ ಹರ್ಷಾಶ್ರುಗಳನ್ನು ಬಿಡುತ್ತಾ, ಭದ್ರಾಯುವನ್ನು ಅಪ್ಪಿಕೊಂಡು, "ಬಾಲಕಾ ! ನೀನು ಯಾರು ? ನನಗಂತು ನೀವು ನನ್ನ ಸಂಕಟವನ್ನು ಪರಿಹರಿಸಲೋಸುಗ ಹರಿಹರರು ಈ ರೂಪದಿಂದ ಬಂದಂತೆ ತೋರುವದು," ಎನಲಾಗಿ ಭದ್ರಾಯುವು, "ಅದಂತೂ ಇರಲಿ ! ಸಧ್ಯಕ್ಕೆ ನೀವು ಪಟ್ಟಣವನ್ನು ಪ್ರವೇಶ ಮಾಡಿರಿ," ಎಂದು ಹೇಳಿದಕೂಡಲೇ ಸಕಲ ನಾಗರಿಕರು ಪುರವನ್ನು ಶೃಂಗರಿಸಿ ಮಹಾ ವೈಭವದೊಡನೆ ವಜ್ರಬಾಹುವನ್ನೂ, ಭದ್ರಾಯು-ಸುನಯರನ್ನೂ ಕರೆದುಕೊಂಡು ಬಂದರು. ವಜ್ರಬಾಹುವು ಸಿಂಹಾಸನದ ಮೇಲೆ ಕುಳಿತಕೂಡಲೆ ಸಮಸ್ತರು ಕಪ್ಪನ್ನು ಅರ್ಪಿಸಿ ನಮಸ್ಕಾರ ಮಾಡಲಾರಂಭಿಸಲು, ರಾಜನು "ಎಲೈ ! ಪ್ರಜರೇ !! ಈ ಪುಣ್ಯಾತ್ಮನಿಂದಲೇ ವೈರಿಗಳು ನಾಶವಾದರು. ಇವನಿಂದಲೇ ನನ್ನ ಬಂಧನವು ಬಿಡಲ್ಪಟ್ಟಿತು. ಆದ್ದರಿಂದ ಈ ಪುಣ್ಯಾತ್ಮನಿಗೆ ಕಪ್ಪನ್ನು ಅರ್ಪಿಸಿರಿ," ಎಂದು ಹೇಳಿದನು. ಭದ್ರಾಯುವು

ಎದ್ದು ನಿಂತು “ ರಾಜನೇ ! ನನಗೆ ಕೆಲಸವಿದ್ದಕಾರಣ ಈಗ ಹೋಗಿ ಮೂರು ದಿವಸಗಳಲ್ಲಿ ಬರುವೆನು. ಅಲ್ಲಿಯವರೆಗೆ ವೈರಿಗಳನ್ನು ಕಾರಾಗೃಹದಲ್ಲಿರಿಸಿ ಜತನದಿಂದ ರಕ್ಷಿಸಿರಿ. ನಾನು ಬಂದ ಬಳಿಕ ನನ್ನ ಯಾವತ್ತೂ ವೃತ್ತಾಂತವು ತಿಳಿಯುವದು,” ಎಂದು ಹೇಳಿ ಸುನಯನೊಂದಿಗೆ ತನ್ನ ಪುರಕ್ಕೆ ಬಂದು ಮಾತೆಯಾದ ಸುಮತಿಗೆ ನಮಸ್ಕರಿಸಿ ನಡೆದ ಯಾವತ್ತೂ ಸಂಗತಿಯನ್ನು ತಿಳುಹಲಾಗಿ ಸುಮತಿಯೂ, ಪದ್ಮಾಕರನೂ ಕೇಳಿ ಪರಮಾನಂದಭರಿತರಾದರು.

ಅತ್ತ ಶಿವಯೋಗಿಯಾದ ಋಷಭ-ಮುನೀಶ್ವರನು ನೈಷಧ ಪಟ್ಟಣಕ್ಕೆ ಬಂದು ಚಂದ್ರಾಂಗದನಿಂದಲೂ, ಸೀಮಂತಿನಿಯಿಂದಲೂ, ಪೂಜೆಯನ್ನು ಗ್ರಹಿಸಿ, ಅವರಿಗೆ ಭದ್ರಾಯುವಿನ ಎಲ್ಲ ವರ್ತಮಾನವನ್ನು ತಿಳುಹಲು ಅವರು ಆನಂದಪಟ್ಟು ತಮ್ಮ ಪುತ್ರಿಯಾದ ಕೀರ್ತಿಮಾಲಿನಿಯನ್ನು ಭದ್ರಾಯುವಿಗೆ ಕೊಡಲಿಕ್ಕೆ ಒಪ್ಪಿಕೊಂಡರು. ಮತ್ತು ಶುಭ-ಮುಹೂರ್ತವನ್ನು ನಿಶ್ಚೈಯಿಸಿ ಚಿತ್ರಾಂಗದನು ಅಳಿಯನನ್ನು ಕರೆತರುವುದಕ್ಕೆ ಪದ್ಮಾಕರನ ಪಟ್ಟಣಕ್ಕೆ ತನ್ನ ಮಂತ್ರಿಗಳನ್ನು ಕಳುಹಿದನು. ಮಂತ್ರಿಗಳು ಬಂದು ಎಲ್ಲ ವರ್ತಮಾನಗಳನ್ನು ನಿವೇದಿಸಿ ಸುಮತಿಯನ್ನೂ, ಪದ್ಮಾಕರನನ್ನೂ, ಭದ್ರಾಯು-ಸುನಯರನ್ನೂ ಮಹಾ ವೈಭವದೊಡನೆ ನೈಷಧಪುರಿಗೆ ಕರೆತಂದು ಒಂದು ಉಪವನದಲ್ಲಿಳಿಸಿದರು. ಚಂದ್ರಾಂಗದನು ಸಹಪರಿವಾರನಾದ ಅಳಿಯನು ಬಂದದ್ದನ್ನು ಚಾರರ ಮುಖದಿಂದ ತಿಳಿದು ಅನೇಕ ವಾದ್ಯಗಳಿಂದಲೂ, ನರ್ತಕಿಯರ ಸಮೂಹದಿಂದಲೂ, ಚತುರಂಗ ಸೈನ್ಯದಿಂದಲೂ ಶೋಭಿತನಾಗಿ ವನಕ್ಕೆ ಬಂದು ಅವನನ್ನು ಎದುರ್ಗೊಂಡು ಪುರ ಪ್ರವೇಶಮಾಡಿದನು. ಈ ವಿವಾಹ ಮಹೋತ್ಸವವನ್ನು ನೋಡುವದಕ್ಕಾಗಿ ನೈಷಧಪುರಿಗೆ ಅನೇಕರಾಜರು ಬಂದಿದ್ದರು. ಅವರಲ್ಲಿ ವಜ್ರಬಾಹುವಾದರೂ ಬಂದಿದ್ದನು. ಇವನು ಭದ್ರಾಯುವನ್ನು ನೋಡಿ, “ ಅಹಾ ! ನನ್ನನ್ನು ರಕ್ಷಿಸಿದ ಸತ್ಪುರುಷನು ಇಲ್ಲಿಯೇ ಬಂದಿರುವನು,” ಎಂದು ತಿಳಿದು ನಮಸ್ಕಾರಕ್ಕೆ ಉದ್ಯುಕ್ತನಾಗಲು ಭದ್ರಾಯುವು ತೀವ್ರಬಂದು ರಾಜನನ್ನು ಆಲಿಂಗಿಸಿದನು. ವಜ್ರಬಾಹು, “ ಪುಣ್ಯಾತ್ಮನೇ ನೀನು ಯಾರು ? ನಿನ್ನ ಪಟ್ಟಣವು ಯಾವುದು ? ನಿನ್ನ ತಂದೆ ಯಾರು ? ” ಎಂದು ಬೆಸಗೊಳ್ಳಲಾಗಿ, ನಿಷಧಾಧಿಪನಾದ ಚಂದ್ರಾಗದನು ವಜ್ರಬಾಹುವನ್ನು ಏಕಾಂತದಲ್ಲಿ ಕರೆದುಕೊಂಡು ಹೋಗಿ ಋಷಭಮುನಿಯು ಹೇಳಿದ ಎಲ್ಲ ವರ್ತಮಾನವನ್ನು ತಿಳಿಸಿದನು. ಅನಂತರ ಸುಮತಿಯು ಬಂದು ವಜ್ರಬಾಹುವಿಗೆ ನಮಸ್ಕರಿಸಲು ರಾಜನು ಲಜ್ಜಿತನಾಗಿ “ ಅಹಾ ! ಪತಿವ್ರತೆಗೆ ಎಷ್ಟು ಕಷ್ಟವನ್ನು ಕೊಟ್ಟೆನಲ್ಲ ! ? ” ಎಂದು ತಲೆಯನ್ನು ಬಗ್ಗಿಸಿ ಕಣ್ಣೀರು ತಂದನು. ಹಾಗೆಯೇ ಸುಮತಿಗಾದರೂ ಅಶ್ರುಧಾರೆಗಳಿಳಿದವು. ಅನಂತರ ಭದ್ರಾಯುವು ಬಂದು ತಂದೆಗೆ ನಮಸ್ಕರಿಸಲು ಅವನು ಆನಂದದಿಂದ ಆಲಿಂಗಿಸಿದನು. ಅನಂತರದಲ್ಲಿ ವಿಧಿಪೂರ್ವಕವಾಗಿ ಲಗ್ನಸಮಾರಂಭವು ನಾಲ್ಕುದಿವಸದ

ವರೆಗೂ ನಡೆದಬಳಿಕ ಚಂದ್ರಾಂಗದನು ಅಳಿಯನಿಗೋಸ್ಕರ ಅನೇಕ ರತ್ನಾಭ ರಣ, ದಾಸ-ದಾಸಿ, ಆನೆ, ಕುದುರೆ, ರಥ ಮೊದಲಾದವುಗಳನ್ನು ಕೊಟ್ಟನು. ಅನಂತರ ಭದ್ರಾಯುವು ಹೆಂಡತಿಯೊಂದಿಗೆ ಮಾತಾ-ಪಿತರನ್ನು ಕರೆದುಕೊಂಡು ಸ್ವಪುರಿಗೆ ಬಂದು ಸೆರೆಯಲ್ಲಿಟ್ಟ ಶತ್ರುಗಳನ್ನು ವರ್ಷಕ್ಕೆ ಇಂತಿಷ್ಟು ಕಪ್ಪಕೊಡ ಬೇಕೆಂಬ ಕರಾರಿನಿಂದ ಮುಕ್ತಮಾಡಿದನು. ವಜ್ರಬಾಹುವು ಭದ್ರಾಯುವಿಗೆ ಪಟ್ಟಣವನ್ನು ಕಟ್ಟಿ ತಾನು ಸುಮತಿಯೊಂದಿಗೆ ತಪಸ್ಸು ಮಾಡಲಿಕ್ಕೆ ಅರಣ್ಯಕ್ಕೆ ಹೋದನು.

ಕೆಲವು ದಿನಗಳಾದ ಮೇಲೆ ಭದ್ರಾಯುವು ವಸಂತಕಾಲದಲ್ಲಿ ವನವಿಹಾರ ಮಾಡುವದಕ್ಕಾಗಿ ಕೀರ್ತಿಮಾಲಿನಿಯೊಂದಿಗೆ ತಾಲ, ಹಿಂತಾಲ, ಪಾಟಲ ಮೊದ ಲಾದ ವೃಕ್ಷಗಳಿಂದ ದಟ್ಟವಾದ, ಚಂಪಕ, ಪಾರಿಜಾತ, ನವಮಲ್ಲಿಕಾದಿ ಕುಸು ಮಗಳಿಂದ ಘಮಘಮಿಸುವ ಮನೋಹರವಾದ ಉಪವನಕ್ಕೆ ಬಂದನು. ಅದೇ ವೇಳೆಯಲ್ಲಿ ಶಂಕರನು ಬಡಹಾರುವನ ವೇಷವನ್ನು ಧರಿಸಿ, ಪಾರ್ವತಿಯನ್ನು ತರುಣ-ಸ್ತ್ರೀಯನ್ನಾಗಿ ಮಾಡಿ, ನಂದಿಯನ್ನು ವ್ಯಾಘ್ರವಾಗಿ ಮಾಡಿ, ರಾಜನ ಪರೀಕ್ಷಾರ್ಥವಾಗಿ ವನದೆಡೆಗೆ ಬಂದು, “ ಅಯ್ಯೋ ! ರಾಜನೇ ! ನನ್ನ ಹೆಂಡ ತಿಯನ್ನು ಹುಲಿಯು ತಿನ್ನುತ್ತದೆ. ದಯಮಾಡಿ ಬಿಡಿಸಿಕೊಳ್ಳಬಾರದೆ ! ” ಎಂದು ಆಕ್ರೋಶ ಮಾಡಲು, ರಾಜನು ಕೇಳಿ ಝಗ್ಗನೆದ್ದು ಧನುಷ್ಯವನ್ನು ಹೆದೆಗೇರಿಸಿ ಎಷ್ಟು ಬಾಣಗಳನ್ನು ಯೋಜಿಸಿದಾಗ್ಯಾದರೂ ಹುಲಿಯು ಸಾಯದೆ ಆ ವಿಪ್ರ ಸ್ತ್ರೀಯನ್ನು ನುಂಗಿಬಿಟ್ಟಿತು. ವಿಪ್ರನು, “ ಅಯ್ಯೋ ! ನನ್ನ ಮುದು ಗಿಳಿಯಾದ ಹೆಂಡತಿಯು ಹೋದಳೆ ! ಎಲೋ ರಾಜನೆ ! ನಿನ್ನ ಶೌರ್ಯಕ್ಕೆ ಧಿಃಕಾರವಿರಲಿ !! ನನ್ನ ಹೆಂಡತಿಯನ್ನು ನೀನೇ ಕೊಂದಿ ! ಯಾಕೆ ರಾಜನಾಗಿ ರುವಿ ? ” ಎಂದು ಅನೇಕ ವಿಧದಿಂದ ಹಳಿಯಲು ಭದ್ರಾಯುವು, “ ವಿಪ್ರೋತ್ತ ಮನೇ ! ನನ್ನಿಂದ ಅಪರಾಧ ಸಂಭವಿಸಿದ್ದು ಸತ್ಯವು. ಆದರೆ ಏನು ಬೇಡುತ್ತೀ ಬೇಡು. ರಾಜ್ಯವನ್ನು ಬೇಡಿದರೆ ಕೊಡುವೆನು. ಲಕ್ಷ್ಮಿಯನ್ನು ಬೇಡಿದರೆ ಕೊಡು ವೆನು ಇಲ್ಲವೆ ನಿನಗೆ ವಿವಾಹವನ್ನು ಮಾಡುವೆನು. ” ಎಂದು ಹೇಳಲಾಗಿ ವಿಪ್ರ ನು, “ ರಾಜನೇ ! ಕುರುಡನಿಗೆ ಕನ್ನಡಿಯಿಂದ ಪ್ರಯೋಜನವೇನು ? ಮೂರ್ಖ ನಿಗೆ ಪುಸ್ತಕದಿಂದ ಉಪಯೋಗವೇನು ? ಅದರಂತೆಯೇ ನಿನ್ನ ರಾಜ್ಯ, ಲಕ್ಷ್ಮಿ ಯನ್ನು ತೆಗೆದುಕೊಂಡು ನಾನೇನು ಮಾಡಲಿ ? ನನ್ನ ಹೆಂಡತಿಯನ್ನೇ ತಂದು ಕೊಡು, ಇಲ್ಲದಿದ್ದರೆ ನಿನ್ನ ಹೆಂಡತಿಯನ್ನು ಕೊಡು ” ಎಂದು ಕೇಳಲಾಗಿ ರಾಜನು ಉಪಾಯರಹಿತನಾಗಿ ವಿಧಿಪೂರ್ವಕವಾಗಿ ಕೀರ್ತಿಮಾಲಿನಿಯನ್ನು ವಿಪ್ರ ನಿಗೆ ದಾನಕೊಟ್ಟು ತಾನು ಅಗ್ನಿ ಪ್ರವೇಶ ಮಾಡಲಿಕ್ಕೆ ಚಿತೆಯನ್ನು ಸಿದ್ಧಪಡಿಸಿ ದನು. ಅಷ್ಟರಲ್ಲಿ ವಿಪ್ರನು ಬಯಲಾಗಲು ರಾಜನು ಚಿತೆಗೆ ಪ್ರದಕ್ಷಿಣೆ ಮಾಡಿ “ ಹೇ ದೇವಾಧಿದೇವಾ !! ಕೈಲಾಸಪತೇ ! ರಕ್ಷಿಸು !! ” ಎಂದು ಹಾರುವ ಸಮ ಯದಲ್ಲಿ ಪಾರ್ವತೀ ಸಹಿತನಾದ ಪರಮೇಶ್ವರನು ಅಗ್ನಿಕುಂಡಲದಲ್ಲಿ ಆವಿರ್ಭವಿಸಿ

ಭದ್ರಾಯುವನ್ನು ಹಿಡಿದು ಮೇಲಕ್ಕೆತ್ತಿ "ಭಕ್ತಾಗ್ರೇಸರಾ ! ನಿನ್ನ ಚಿತ್ತವನ್ನು ಪರೀಕ್ಷಿಸಲೋಸುಗ ನಾನೇ ವಿಪ್ರನ ವೇಷದಿಂದ ನಿನ್ನ ಹೆಂಡತಿಯನ್ನು ಯಾಚಿ ದೆನು ಇಗೋ ! ಕೀರ್ತಿಮಾಲಿನಿಯನ್ನು ತೆಗೆದುಕೋ ! !" ಎಂದು ಕೊಟ್ಟು "ಏನು ಬೇಡುತ್ತೀ ಬೇಡು," ಎನ್ನಲಾಗಿ ಭದ್ರಾಯುವು ಮಾತಾ-ಪಿತರಿಗೂ ಸ್ತ್ರೀ ಸಹಿತ ಪದ್ಮಾಕರನಿಗೂ ನಿನ್ನ ಪದವಿಯನ್ನು ಕೊಡೆಂದನು. ಕೀರ್ತಿಮಾ ನಿಯು ತನ್ನ ತಂದೆ-ತಾಯಿಗಳಿಗೆ ನಿನ್ನ ಲೋಕವನ್ನು ಕೊಡೆಂದಳು. ಶಂಕರ 'ತಥಾಸ್ತು' ಎಂದು ಮಾಯವಾದನು. ಇತ್ತ ಭದ್ರಾಯುವು ಹತ್ತುಸಹಸ್ರ ವರ್ಷ ರಾಜ್ಯಭಾರ ಮಾಡಿ ಅನಂತರದಲ್ಲಿ ಶಿವ-ಪದವಿಯನ್ನು ಹೊಂದಿದನು.

ಎಂಟನೇ ಅಧ್ಯಾಯ ಸಂಪೂರ್ಣವಾದುದು.



# ಒಂಭತ್ತನೇ ಅಧ್ಯಾಯ ಪ್ರಾರಂಭವು.

## ವಾಮದೇವ ಮತ್ತು ಬ್ರಹ್ಮರಾಕ್ಷಸ ಶಬರ ಮತ್ತು ಸಿಂಹಕೇತ ಇವರ ಕಥೆಗಳು.

# ವಾಮದೇವ ವ ಬ್ರಹ್ಮರಾಕ್ಷಸ ಇವರ ಕಥೆ.



ಪೂರ್ವದಲ್ಲಿ ಭಸ್ಮಲೇಪಿತನಾದ, ನಾರು ವಸ್ತ್ರವನ್ನು ಧರಿಸಿದ, ದ್ವಂದ್ವ ಹೀನನಾದ, ವೈರಾಗ್ಯ-ಧನದಿಂದ ಶೋಭಿತನಾದ, ಆತ್ಮಾರಾಮನಾದ ವಾಮದೇವ ನೆಂಬ ಮುನಿವರ್ಯನು ಆಕಸ್ಮಾತ್ತಾಗಿ ಕೌಂಚಾರಣ್ಯವನ್ನು ಪ್ರವೇಶಿಸಿದನು ಅಲ್ಲಿ ಘೋರತನದಿಂದ ವಾಸಮಾಡಿರುವ, ಹಸಿವೆ-ನೀರಡಿಕೆಗಳಿಂದ ಬಳಲುತ್ತಿ ರುವ ಓರ್ವ ಬ್ರಹ್ಮರಾಕ್ಷಸನು ಮುನಿಯನ್ನು ಕಂಡು ತನಗೆ ಆಹಾರ ದೊರೆ ತೆಂದು ಸಂತೋಷಪಟ್ಟು, ಅಟ್ಟಹಾಸ ಮಾಡಿ ನಾಲಿಗೆಯನ್ನು ಚಾಚಿ ಕೈಗಳನ್ನು ಮೇಲಕ್ಕೆತ್ತಿ ಹಗಲಿನಲ್ಲಿಯೇ ತನ್ನ ಕಾಂತಿಯಿಂದ ಕತ್ತಲೆ ಮಾಡಿ ಓಡುತ್ತ ಬಂದು ಮುನಿವರ್ಯನನ್ನು ತನ್ನ ಎರಡೂ ಹಸ್ತಗಳಿಂದ ಹಿಚುಕಿತು. ವಾಮದೇವನು ಆತ್ಮಾರಾಮನಾದ ಪ್ರಯುಕ್ತ ರಾಕ್ಷಸನು ತನ್ನನ್ನು ಹಿಡಿದನೆಂಬುವದು ಸ್ವಲ್ಪ ದರೂ ಎಚ್ಚರಿಕೆ ಬರಲಿಲ್ಲ. ನಿಶಾಚರನು ಮುನಿಯ ಅಂಗಸ್ಪರ್ಶ ಮಾಡಿದಕೂಡಲೆ ಆ ಭಸ್ಮವು ಹತ್ತಿ ಆ ರಾಕ್ಷಸ-ಶರೀರವನ್ನು ಬಿಟ್ಟು ದಿವ್ಯ ದೇಹವನ್ನು ಧ

ಕೈಜೋಡಿಸಿಕೊಂಡು, "ಎಲೈ ಮಹಾತ್ಮನೇ! ನಿನ್ನ ಸ್ಪರ್ಶಮಾತ್ರದಿಂದಲೇ ನನ್ನ ಪಾಪಗಳು ನಾಶವಾಗಿ ಉತ್ತಮ ದೇಹ ಪಡೆದಿರುವೆನು. ಅಲ್ಲದೆ ಐವತ್ತು ಜನ್ಮಗಳ ಜ್ಞಾನವು ಪ್ರಾಪ್ತವಾಗಿರುವದು. ಅದರಲ್ಲಿ ಇಪ್ಪತ್ತೈದು ಜನ್ಮಗಳಲ್ಲಿ ಮಹತ್ಪಾಪ ಮಾಡಿರುವೆನು ಇದನ್ನು ನಿನ್ನೆದುರಿನಲ್ಲಿ ಉಸುರುವೆನೆಂದು ಹೇಳತೊಡಗಿದನು. ........ ........ . *

"ಮುನಿಯೇ ಪೂರ್ವದಲ್ಲಿ ನಾನು ಯವನ ರಾಷ್ಟ್ರಾಧಿಪತಿಯಾದ ದುರ್ಜಯನೆಂಬ ಅರಸನಾಗಿದ್ದೆನು. ಆವಾಗ್ಯೆ ನಾನು ಏನೊಂದೂ ಸತ್ಕರ್ಮ ಮಾಡದೆ ಪ್ರತಿದಿವಸ ಶಸ್ತ್ರಪಾಣಿಯಾಗಿ, ಅಪರಾಧ ಮಾಡದ ಮೃಗಗಳನ್ನು ಕೊಲ್ಲುತ್ತಾ ಪ್ರಜರಿಗೂ, ಬ್ರಾಹ್ಮಣರಿಗೂ ಬಹಳೇ ಕಷ್ಟಕೊಟ್ಟೆನು. ದಿನಂಪ್ರತಿ ದೂತರಿಂದ ಪಟ್ಟಣದಲ್ಲಿ ವಾಸಮಾಡಿರುವ ನೂತನ ಯೌವನಸ್ಥ ತರುಣಿಯರನ್ನು ಎಳತರಿಸಿ ಅವರನ್ನು ಉಪಭೋಗಿಸಿ ಮರುದಿನ ಕಾರಾಗೃಹದಲ್ಲಿ ಇಡುತ್ತಿದ್ದೆನು. ಈ ಪ್ರಕಾರ ಸ್ವದೇಶದ ಸ್ತ್ರೀಯರೂ ನನ್ನಿಂದ ಭೋಗಿಸಲ್ಪಟ್ಟವರಾಗಿ ಕಾರಾಗೃಹದಲ್ಲಿ ಬಿದ್ದು ದಿನಾಲೂ ನನ್ನನ್ನು ಶಪಿಸುತ್ತಿದ್ದರು. ನನ್ನ ಕೃತ್ಯವನ್ನು ಕಂಡು ಸಕಲ ಬ್ರಾಹ್ಮಣರೂ ಪರದೇಶಕ್ಕೆ ತೆರಳಿದರು. ದೇವಾ! ವಿಶೇಷವೇನು ಹೇಳಲಿ!! ನನ್ನಿಂದ ಗಂಡುಳ್ಳವರೂ, ಕನ್ನಿಕೆಯರೂ, ವಿವಾಹವಾಗುವವರೂ, ರಜಸ್ವಲೆಯಾದವರೂ ಎಲ್ಲರೂ ಭೋಗಿಸಲ್ಪಟ್ಟರು. ಮುಖ್ಯವಾಗಿ ನಾನು ಮೂರು ನೂರು ವಿಪ್ರ ಸ್ತ್ರೀಯರನ್ನೂ, ನಾಲ್ಕುನೂರು ರಾಜ-ಸ್ತ್ರೀಯರನ್ನೂ, ಆರುನೂರು ವೈಶ್ಯಸ್ತ್ರೀಯರನ್ನೂ, ಸಹಸ್ರ ಶೂದ್ರ ಸ್ತ್ರೀಯರನ್ನೂ, ನೂರು ಚಂಡಾಲ ಸ್ತ್ರೀಯರನ್ನೂ, ಸಹಸ್ರ ಪುಲಿಂದ ಜಾತಿಯ ಸ್ತ್ರೀಯರನ್ನೂ. ನಾಲ್ಕುನೂರು ಅಗಸರ ಸ್ತ್ರೀಯರನ್ನೂ ಭೋಗಿಸಿದಾಗ್ಯೂ ನನ್ನ ಕಾಮನವು ತೀರಲಿಲ್ಲ. ನಂತರ ನನ್ನ ದೇಹದಲ್ಲಿ ಕ್ಷಯ ರೋಗಸೇರಿ, ಅದರಿಂದಲೇ ಮರಣಹೊಂದಿದೆನು. ಕೂಡಲೇ ಯಮದೂತರು ಬಂದು ನನ್ನನ್ನು ಯಮಪುರಿಗೆ ಒಯ್ದು, ಉಕ್ಕಿನ ಕಾಗೆಗಳಿಂದ ನನ್ನ ಕಣ್ಣನ್ನು ಕುಕ್ಕಿಸಿದರು; ಕಾಡ ಉಕ್ಕಿನ ಗೊಂಬೆಯನ್ನು ತಂದು ನನಗೆ ಅಪ್ಪಿಸಿದರು; ನೀರಡಿಕೆಯಿಂದ ಕಾದ ಕಬ್ಬಿಣದ ರಸವನ್ನು ಬಾಯಲ್ಲಿ ಸುರುವಿದರು. ಹಸಿವೆಯೆಂದರೆ ನನ್ನಕೈಕಾಲು ಮೂಗು ಮೊದಲಾದವುಗಳನ್ನು ಕೊಯ್ದು ಬಾಯಲ್ಲಿಟ್ಟರು. ದೇವಾ! ಆ ಬಾಧೆಯನ್ನು ಎಷ್ಟೆಂದು ಹೇಳಲಿ!! ಕೆಲವು ದಿನಗಳ ವರೆಗೆ ನನ್ನನ್ನು ಮಲಮೂತ್ರ, ಕೀವು, ರಕ್ತ, ರೇತಸ್ಸುಗಳಿಂದ ತುಂಬಿದ ಕುಂಡಲದಲ್ಲಿ ಒಗೆದರು. ಯಮದೂತರು ಕಾದ ಕಬ್ಬಿಣದ ಮುಳ್ಳುಗಳಿಂದ ಯುಕ್ತವಾದ ಪಟ್ಟಣಗಳಿಂದ ಹೊಡೆದಕೂಡಲೆ ಹಲ್ಲೆ ಉದುರುತ್ತಿದ್ದವು. ಈ ಪ್ರಕಾರ ಮೂರುವರ್ಷದ ಕಷ್ಟವನ್ನನುಭೋಗಿಸಿದನಂತರ ಹಾವು, ಕರಡಿ, ಮಂಗ, ಕತ್ತೆ ಮೊದಲಾದ ಜನ್ಮಗಳನ್ನು ಪಡೆದು ತಿರುಗುತ್ತಿರುವಾಗ ನಿನ್ನಿಂದ ಉದ್ಧಾರಾದೆನು. ದೇವಾ! ನನ್ನನ್ನು ರಕ್ಷಿಸಬೇಕು." ಎಂದು ಪ್ರಾರ್ಥಿಸಲು ವಾಮದೇವನು, "ಎಲೈ ರಕ್ಕಸನೇ! ನೀನು ಉದ್ಧಾರಾಗುವದೇನೂ ಆಶ್ಚರ್ಯವಲ್ಲ, ಭಸ್ಮಲೇಪನದಿಂದ ಪಂಚಮಹಾ

ಪಾಪಿಗಳಾದರೂ ತತ್‌ಕ್ಷಣದಲ್ಲಿಯೇ ಕೈಲಾಸಕ್ಕೆ ಗಮಿಸಿರುವರು. ಈ ವಿಷಯದಲ್ಲಿ ಒಂದು ಆಖ್ಯಾನವನ್ನು ಹೇಳುವೆನು ಕೇಳು. " ಎಂದನು.

" ಪೂರ್ವದಲ್ಲಿ ಓರ್ವ ವಿಪ್ರನು ಸಕಲ ಕರ್ಮಾಚಾರಗಳನ್ನು ತೊರೆದು ಓರ್ವ ಶೂದ್ರ ಸ್ತ್ರೀಯಲ್ಲಿ ಆಸಕ್ತನಾಗಿದ್ದನು. ಆ ವನಿತೆಯ ಗಂಡನು ಇದನ್ನು ನೋಡಿ ಮಹಾಕೋಪದಿಂದ ಸಂತಪ್ತನಾಗಿ ರಾತ್ರಿಕಾಲದಲ್ಲಿ ಈ ಹಾರುವನನ್ನು ಟೊಣಪಿಯಿಂದ ಬಡೆದು ಕೊಂದು ಆ ಹೆಣವನ್ನು ಊರಹೊರಗೆ ಚೆಲ್ಲಿಬಿಟ್ಟನು. ಕೂಡಲೇ ಯಮದೂತರು ಬಂದು ಹಾರುವನನ್ನು ಹಿಡಿದು ಕಾಲನ ಗೃಹಕ್ಕೆ ಎಳೆದೊಯ್ದರು. ಆವೊತ್ತು ಶಿವರಾತ್ರಿಯಿದ್ದುದರಿಂದ ಕೆಲವು ಬ್ರಾಹ್ಮಣರು ಶಿವಲಿಂಗ ಪೂಜಾರ್ಥವಾಗಿ ಒಂದು ದೇವಾಲಯದಲ್ಲಿ ಬಂದಿದ್ದರು. ಅಲ್ಲಿಯೇ ಹೊರಭಾಗದಲ್ಲಿ ಭಸ್ಮವನ್ನಿಟ್ಟಿದ್ದರು. ಅಲ್ಲಿ ಒಂದು ನಾಯಿಯು ಬಂದು ಭಸ್ಮದಲ್ಲಿ ಹೊರಳಾಡಿ ಊರಹೊರಗೆ ಬರಲು, ಬ್ರಾಹ್ಮಣನ ಹೆಣವನ್ನು ಮಾಂಸದಾಸೆಯಿಂದ ಅದರ ಮೇಲೆ ಹೊರಳಾಡಿತು. ಆವಾಗ್ಗೆ ಹೆಣಕ್ಕೆ ಸ್ವಲ್ಪ ಲೇಪಿತವಾಗಲು, ಶಿವದೂತರು ಬಂದು ಯಮದೂತರ ಕೈಯಲ್ಲಿ ಸಿಕ್ಕ ಹಾರುವನನ್ನು ಬಿಡಿಸಿಕೊಂಡು ಕೈಲಾಸಕ್ಕೆ ತೆರಳಿದರು. ಆದ್ದರಿಂದ ರಕ್ಕಸನೇ! ವಿಭೂತಿ ಮಹಿಮೆಯನ್ನು ಹೇಳುವದು ಯಾರಿಂದಲೂ ಅಸಾಧ್ಯವೆಂದು ತಿಳಿ! ಎನಲಾಗಿ, ಅಸುರನು ಭಸ್ಮ ಮಹಿಮೆಯನ್ನು ಹೇಳಿನ್ನಲು ಮುನಿಶ್ರೇಷ್ಠನಿಂತೆಂದನು. " ದನುಜನೇ! ಕೈಲಾಸದಲ್ಲಿ ಮೂವತ್ತುಮೂರುಕೋಟಿ ದೇವತೆಗಳೂ, ಮೂವತ್ತುಮೂರು ಮರುದ್ಗಣಗಳೂ, ಅಷ್ಟವಸುಗಳೂ, ಸಪ್ತರ್ಷಿಗಳೂ, ನಾರದತುಂಬರಾದಿಗಳೂ, ನವಗ್ರಹಗಳೂ, ಬ್ರಹ್ಮ-ವಿಷ್ಣ್ವಾದಿಗಳೂ, ಕರಿಚರ್ಮಾಂಬರವನ್ನು ಧರಿಸಿ ವ್ಯಾಘ್ರಾಂಬರದಲ್ಲಿ ವಿಶ್ರಮಿಸಿರುವ ಶಂಕರನ ಮುಂಭಾಗದಲ್ಲಿ ಕುಳಿತಿರುವ ಕಾಲದಲ್ಲಿ ಸನಕಾದಿಗಳು ಬಂದು ನಮಸ್ಕರಿಸಿ, " ಮಹಾದೇವನೇ! ವಿಭೂತಿ ಧರಿಸುವ ಕ್ರಮವನ್ನು ಪೇಳಬೇಕು. " ಎನಲಾಗಿ, ಪಾರ್ವತೀಶನು " ಉತ್ತಮ-ವಾದ ಗೋಮಯವನ್ನು ಅಗ್ನಿಯಲ್ಲಿ ದಗ್ಧಮಾಡಬೇಕು. ನಂತರ ಆ ವಿಭೂತಿಯನ್ನು ತೆಗೆದುಕೊಂಡು ಶಿವಗಾಯತ್ರೀ ಮಂತ್ರದಿಂದ ಅಭಿಮಂತ್ರಿಸಿ ಹಣೆಯಲ್ಲಿ ಧರಿಸಬೇಕು. ಈ ಶಿವಭೂಷಣವನ್ನು ಯಾವನು ಧರಿಸುವನೋ ಅವನು ಬ್ರಹ್ಮಹತ್ಯ, ಗೋಹತ್ಯ, ಸ್ತ್ರೀಹತ್ಯ ಮೊದಲಾದ ಪಾತಕಗಳಿಂದ ಉದ್ಧಾರವಾಗುವನು " ಎಂದು ಹೇಳಿದನು. ಇದೇ ವಿಭೂತಿ ಮಹಿಮೆಯು! " ಎಂದು ವಾಮದೇವನು ರಕ್ಕಸನಿಗೆ ಹೇಳುವಷ್ಟರಲ್ಲಿಯೇ ಆಕಾಶಮಾರ್ಗದಿಂದ ಶಿವದೂತರು ವಿಮಾನವನ್ನು ತೆಗೆದುಕೊಂಡು ಅಲ್ಲಿಗೆ ಇಳಿದರು. ನಂತರ ರಾಕ್ಷಸನು ಮುನೀಶ್ವರನಿಗೆ ನಮಸ್ಕರಿಸಿ, ದಿವ್ಯದೇಹವನ್ನು ಧರಿಸಿ ಕೈಲಾಸಕ್ಕೆ ತೆರಳಿದನು. ವಾಮದೇವನಾದರೂ ಸಂಚಾರಾರ್ಥ ಗಮನಮಾಡಿದನು.



# ಶಬರ ಮತ್ತು ಸಿಂಹಕೇತ ಇವರ ಕಥೆ.



ಪಾಂಚಾಲ ದೇಶದಲ್ಲಿ ವೀರಾಧಿವೀರನಾದ ಸಿಂಹಕೇಶನೆಂಬ ರಾಜನು ಭೂಪರಿಪಾಲನೆಯಲ್ಲಿ ತತ್ಪರನಾಗಿದ್ದನು ಒಂದಾನೊಂದು ದಿವಸ ರಾಜನು ಬೇಟಿ ಯಾಡುವದಕ್ಕಾಗಿ ಓರ್ವ ಬೇಡರವನೊಂದಿಗೆ ಅರಣ್ಯವನ್ನು ಪ್ರವೇಶಿಸಿ, ಅನೇಕ ಮೊಲಗಳನ್ನು ವಧಿಸುತ್ತಿರಲಾಗಿ ಬೇಡನು ಅದೇ ಕಾನನದಲ್ಲಿ ಒಂದು ದೇವಾಲ ಯವನ್ನು ಕಂಡು ಭೂಪತಿಗೆ ತೋರಿಸಲಾಗಿ ಆ ಸಿಂಹಕೇತನು ಅಲ್ಲಿಗೆ ಬಂದು ಒಳಗೆ ನೋಡಿ, "ಎಲೈ ಶಬರನೇ ! ಇಲ್ಲಿರುವ ಲಿಂಗವನ್ನು ತೆಗೆದುಕೊಂಡು ನಿಮ್ಮ ಮನೆಯಲ್ಲಿರಿಸಿ ಪೂಜೆಮಾಡು. ಅದರಿಂದ ನಿನಗೆ ಗುಣವಾಗುವದು." ಎಂದು ಹೇಳಲಾಗಿ, ಮಹಾಭಾವಿಕನಾದ ಶಬರನು ಆ ಲಿಂಗವನ್ನು ತೆಗೆದು ರಾಜ ನಿಗೆ, "ದೇವನೇ ! ಈ ಲಿಂಗವನ್ನು ಹೇಗೆ ಪೂಜಿಸಬೇಕು ? ಅದರ ವಿಧಾನವ ನ್ನೆಲ್ಲ ಪೇಳಬೇಕು," ಎಂದು ಬೆಸಗೊಳ್ಳಲಾಗಿ ರಾಜನು ಇವನಿಗೆ ಪರಿಹಾಸ ಮಾಡುತ್ತಾ, "ಎಲಾ ! ಲಿಂಗಪೂಜೆಗೆ ಮುಖ್ಯವಾಗಿ ಚಿತಾಭಸ್ಮ ಬೇಕು. ಅದ ರಿಂದ ಪ್ರತಿದಿವಸ ನೂತನ ಚಿತಾ-ಭಸ್ಮವನ್ನು ತಂದು ಲಿಂಗಕ್ಕೆ ಹಚ್ಚಿ ನಂತರ ನೈವೇದ್ಯ ಮಾಡಬೇಕು," ಎಂದು ಹೇಳಲು ಇವನ ಮಾತಿಗೆ ಶಬರನು ಒಪ್ಪಿ ಬೇಟೆ ತೀರಿದನಂತರ ಮನೆಗೆಬಂದು ಬೇಡನು ತನ್ನ ಹೆಂಡತಿಗೆ ತಾನು ಲಿಂಗದ ಬಗ್ಗೆ ಎಲ್ಲ ವರ್ತಮಾನವನ್ನು ತಿಳಿಸಿದನು. ಅವಳಾದರೂ ಪತಿಯ ಕೃತ್ಯಕ್ಕೆ ಸಮ್ಮತಿಸಿ ಆನಂದಭರಿತಳಾದಳು ಶಬರನು ಪ್ರತಿದಿವಸದ ನೂತನ ಚಿತಾ-ಭಸ್ಮವನ್ನು ತಂದು ಲಿಂಗವನ್ನು ಪೂಜಿಸಿ ನಂತರದಲ್ಲಿ ನೈವೇದ್ಯ ಮಾಡುತ್ತಿದ್ದನು. ಹೀಗೆ ಕೆಲವು ಕಾಲ ಕಳೆದ ಬಳಿಕ ಒಂದಾನೊಂದು ದಿನ ಪಾರ್ವತೀಶನು ಈ ಶಬ ರನ ಮನವನ್ನು ಪರೀಕ್ಷಿಸಲೋಸುಗ ಆವೊತ್ತು ಎಲ್ಲಿಯೂ ಚಿತಾಭಸ್ಮ ದೊರೆ ಯದಂತೆ ಮಾಡಿದ್ದನು.

ಇತ್ತ ಶಬರನು ನೇಮದಂತೆ ಪ್ರಾತಃಕಾಲಕ್ಕೆದ್ದು ಚಿತಾ-ಭಸ್ಮವನ್ನು ಹುಡು ಕಲಿಕ್ಕೆ ನಡೆದನು. ಎಷ್ಟು ಶೋಧಿಸಿದಾಗ್ಯಾದರೂ ಆವೊತ್ತು ಭಸ್ಮದೊರಿಯ ದ್ದರಿಂದ ಖಿನ್ನನಾಗಿ, "ಅಹಾ ! ಇವೊತ್ತಿಗೆ ನನ್ನದೇವರು ಉಪವಾಸ ಮಾಡಿ ತಲ್ಲ ! ! " ಎಂದು ದುಃಖಿಸುತ್ತಾ, ಮನೆಗೆ ಬಂದು ಸುಮ್ಮನೆ ಕೂಡಲು, ಶಬರನ ಹೆಂಡತಿಯು ಹತ್ತರ ಬಂದು ವಲ್ಲಭನನ್ನು ವಿಚಾರಿಸಿ ದುಃಖದ ಕಾರಣವನ್ನು ತಿಳಿದು, "ವಲ್ಲಭನೇ ! ಇದಕ್ಕೇಕೆ ಚಿಂತೆಮಾಡುವಿ ? ಮನಿಯಲ್ಲಿಯೇ ಅಗ್ನಿ ಯನ್ನು ಸಿದ್ಧಮಾಡು; ನಾನು ಅದರಲ್ಲಿ ಬೀಳುವೆನು; ನನ್ನಿಂದ ಉತ್ಪನ್ನವಾದ ಭಸ್ಮ ದಿಂದ ಲಿಂಗವನ್ನು ಪೂಜಿಸಬಹುದು" ಎಂದು ಹೇಳಿ ಪತಿಯ ಆಜ್ಞೆಯನ್ನು ಪಡೆದು ಅಗ್ನಿಪ್ರವೇಶ ಮಾಡಿದಳು. ನಂತರ ಶಬರನು ಭಸ್ಮವನ್ನು ತೆಗೆದುಕೊಂಡು ಲಿಂಗವನ್ನು ಪೂಜಿಸಿ ಧ್ಯಾನಸ್ಥನಾಗಿ ಹೆಂಡತಿಯು ಮೃತಪಟ್ಟಿದ್ದನ್ನು ಮರೆತು

ಪ್ರತಿದಿವಸದಲ್ಲಿ ಕರೆಯುವಂತೆ ತನ್ನ ಹೆಂಡತಿಗೆ ನೈವೇದ್ಯವನ್ನು ತೆಗೆದುಕೊಂಡು ಬಾ, ತಡಮಾಡಬೇಡವೆಂದು ಒದರಲಾಗಿ ಶಬರನ ಹೆಂಡತಿಯು ದಿವ್ಯ ದೇಹವನ್ನು ಧರಿಸಿ, ಸುವರ್ಣದ ತಳಿಗೆಯಲ್ಲಿ ಪಂಚ-ಪಕ್ವಾನ್ನಗಳನ್ನಿರಿಸಿಕೊಂಡು ಗಂಡನಹತ್ತರ ಬರಲು, ಶಬರನು ಭಕ್ತಿಯಿಂದ ಆ ಪದಾರ್ಥಗಳನ್ನು ಲಿಂಗಕ್ಕೆ ಅರ್ಪಿಸಿ ತಿರುಗಿ ಹೆಂಡತಿಯನ್ನು ನೋಡಿ ಆಶ್ಚರ್ಯಭರಿತನಾದನು. ಅಷ್ಟರಲ್ಲಿ ಶಿವಲೋಕದಿಂದ ವಿಮಾನ ಬರಲು ಅದರಲ್ಲಿ ಈರ್ವರೂ ಕುಳಿತು ಕೈಲಾಸಕ್ಕೆ ತೆರಳಿದರು. ಈ ವರ್ತಮಾನವನ್ನು ಸಿಂಹಕೇತರಾಜನು ಕೇಳಿ, ಆಹಾ! ಹಾಸ್ಯಾಸ್ಪದವಾಗಿ ಹೇಳಿದ ಮಾತಿನಿಂದಲೆ ಶಬರನು ಮುಕ್ತಿಯನ್ನು ಪಡೆದನು. ಮುಖ್ಯವಾಗಿ ಮನುಷ್ಯರಿಗೆ ಭಕ್ತಿಯೇ ಕಾರಣವು ಎಂದು ನಂಬಿ, ರಾಜನು ಸೋಮವಾರ, ಪ್ರದೋಷ, ಶಿವರಾತ್ರಿ ಮೊದಲಾದ ವ್ರತಗಳನ್ನು ನೇಮದಿಂದ ಮಾಡುತ್ತಾ, ಶಿವನಪ್ರೀತ್ಯರ್ಥವಾಗಿ ಅನೇಕ ದಾನ-ಧರ್ಮಗಳನ್ನು ಮಾಡುತ್ತಾ ಈ ಲೋಕದಲ್ಲಿ ಕೀರ್ತಿಪಡೆದು ಕಡೆಯಲ್ಲಿ ಶಿವಸಾಯುಜ್ಯವನ್ನು ಪಡೆದನು.

೯ ನೇ ಸಂಧಿ ಸಂಪೂರ್ಣವಾದುದು.

# ಹತ್ತನೇ ಅಧ್ಯಾಯ ಪ್ರಾರಂಭವು.

 

## ಶಾರದೆಯ ಕಥೆ.





ಪೂರ್ವದಲ್ಲಿ ಆನರ್ತವೆಂಬ ದೇಶದಲ್ಲಿ ವೇದವೇದಾಂಗ ಪುರಾಣಜ್ಞನಾದ ದೇವರಥನೆಂಬ ಬ್ರಾಹ್ಮಣನು ಇದ್ದನು. ಇವನಿಗೆ ಲೋಕೋತ್ತರ ಸುಂದರಿಯಾದ ಶಾರದೆಯೆಂಬ ಪುತ್ರಿಯಿದ್ದಳು. ದೇವರಥನು ಮಂದಹಾಸದಿಂದ ಬೆಳದಿಂಗಳನ್ನು ನಿಂದಿಸುವ ಎಳೆಬಾಳೆಯ ಸುಳಿಯಂತೆ ಕೋಮಲಾಂಗಿಯಾದ ತನಯಳನ್ನು ಪದ್ಮನಾಭನೆಂಬ ತರುಣ ಬ್ರಾಹ್ಮಣನಿಗೆ ವಿಧಿಪೂರ್ವಕವಾಗಿ ಧಾರೆಯೆರೆದು ಅಳಿಯನನ್ನೂ, ಮಗಳನ್ನೂ ತನ್ನ ಮನೆಯೊಳಗೆ ಇರಿಸಿಕೊಂಡನು. ಒಂದು ದಿವಸ ತನ್ನ ಗೆಳೆಯರೊಂದಿಗೆ ಸಾಯಂಕಾಲದಲ್ಲಿ ಸಂಧ್ಯಾವಂದನೆಗೋಸುಗ ನದಿಗೆಬಂದು ನಿತ್ಯಕರ್ಮಗಳನ್ನು ನೆರವೇರಿಸಿ ತಿರುಗಿ ಮನೆಗೆ ಬರುವ ಮಾರ್ಗದಲ್ಲಿ ದುರ್ದೈವ ಮಾಹಾತ್ಮೆಯಿಂದ ಕೃಷ್ಣಸರ್ಪ ಕಚ್ಚಿದ್ದರಿಂದ ಮೃತಪಟ್ಟನು. ಈ ವಾರ್ತೆಯು ನಗರದಲ್ಲೆಲ್ಲ ಹಬ್ಬಿತು. ದೇವರಥನು ತನ್ನ ಅಳಿಯನು ಹಾವುಕಚ್ಚಿ ದೇಹಬಿಟ್ಟನೆಂದು ಕೇಳಿ ದುಃಖಾಕ್ರಾಂತನಾಗಿ ಹೆಂಡತಿ, ಮಗ

ಳೊಂದಿಗೆ ಆಸ್ಥಾನಕ್ಕೆ ಬಂದನು. ಅದಲ್ಲದೆ ಪುರಜನರಾದರೂ ಬಂದರು. ಆ ಕಾಲದಲ್ಲಿ ಶಾರದೆಯ ಶೋಕವನ್ನು ಏನು ಹೇಳುವದು ? ಎದೆ ಎದೆ ಬಡೆದುಕೊಳ್ಳುತ್ತಾ, ಸರ್ವಾಭರಣಗಳನ್ನು ಹರಿದು ಒಗೆದು, ಭೂಮಿಯಲ್ಲಿ ಹೊರಳಾಡುತ್ತಾ, "ಹಾ ವಿಧಿಯೇ ! ನಾನೇನು ಅಪರಾಧ ಮಾಡಿರುವೆನೆಂದು ಈ ಕಷ್ಟವನ್ನು ಕೊಟ್ಟೆ ?" ಎಂದು ನಾನಾತರವಾದ ಶೋಕ ಮಾಡಲು, ಪುರಜನರು ಸಮಾಧಾನ ಮಾಡಿ ಎಲ್ಲರನ್ನೂ ಗೃಹಕ್ಕೆ ಕರೆತಂದರು ನಂತರ ದೇವರಥನು ಅಳಿಯನಿಗೆ ಮಾಡತಕ್ಕ ಯಾವತ್ತೂ ಉತ್ತರ ಕ್ರಿಯಾದಿಗಳನ್ನು ನೆರವೇರಿಸಿ ಮಗಳಿಗೆ ವಿಧವಾ-ಕರ್ಮವನ್ನು ಮಾಡಿಸಿದನು. ಕೆಲವು ದಿನಗಳಾದ ಬಳಿಕ ಗೃಹದಲ್ಲಿ ಶಾರದೆಯು ಹೊರ್ತು ಯಾರೂ ಇಲ್ಲದ ಕಾಲದಲ್ಲಿ ವಯೋವೃದ್ಧನಾದ, ಸಮಾಧಿನಿಷ್ಠಾ-ಗರಿಷ್ಠನಾದ, ಮಹಾಜ್ಞಾನಿಯಾದ, ತಪಸ್ಸಿನಿಂದ ಅರ್ಧಕಣ್ಣುಮುಚ್ಚಿಕೊಂಡವನಾದ ನೈಧ್ರುವನೆಂಬ ಋಷಿವರ್ಯನು ತನ್ನ ಶಿಷ್ಯರೊಂದಿಗೆ ಶಾರದೆಯ ಗೃಹಕ್ಕೆ ಬರಲು, ಶಾರದೆಯು ಅವಸರದಿಂದ ಎದ್ದು ಮುನೀಶ್ವರನನ್ನು ಆಸನದಮೇಲೆ ಕುಳ್ಳಿರಿಸಿ ಚರಣವನ್ನು ತೊಳೆದು ಪೂಜೆಮಾಡಿ ನಮಸ್ಕರಿಸಿದಳು, ಋಷೀಶ್ವರನು ಯಾವಾಗಲೂ ಕಣ್ಣುಗಳನ್ನು ಮುಚ್ಚಿಕೊಂಡೇ ಇದ್ದದರಿಂದ ಇವಳ ಸ್ವರೂಪವನ್ನು ನೋಡದೆ, 'ಏಕಪುತ್ರ ಸೌಭಾಗ್ಯವತಿಭವ' ಎಂದು ಆಶೀರ್ವದಿಸಲು, ಶಾರದೆಯು ದುಃಖಿಸುತ್ತಾ ತನ್ನ ವೃತ್ತಾಂತವನ್ನು ಹೇಳಿ, "ದೇವಾ ! ವಿಧವೆಯಾದ ನನಗೆ ಸೌಭಾಗ್ಯವೂ, ಪುತ್ರನೂ ದೊರಕುವವೆಂಬ ಮಾತು ಸತ್ಯವಾಗದು" ಎಂದು ಹೇಳಲಾಗಿ ಮುನಿಯು, "ಸುದತಿಯೇ ! ನನ್ನ ಮುಖದಿಂದ ಹೊರಟ ವಾಕ್ಯವು ಎಂದಿಗೂ ಸುಳ್ಳಾಗದು. ಎಂಥ ಅಸಂಭವನೀಯ ಕಾರ್ಯವನ್ನಾದರೂ ನನ್ನ ತಪೋಬಲದಿಂದ ನೆರವೇರಿಸುವೆನು. ನೀನು ಸ್ವಲ್ಪಾದರೂ ಚಿಂತಿಸಬೇಡ" ಎಂದು ಹೇಳುವಷ್ಟರಲ್ಲಿಯೇ ಹೊರಗೆ ಹೋಗಿದ್ದ ದೇವರಥಾದಿಗಳು ಮನೆಗೆ ಬಂದು ಶಾರದೆಯಿಂದ ನಡೆದ ಸಂಗತಿಯನ್ನು ತಿಳಿದು, ಕೆಲವರು ಮುನಿಗಳೆಂದರೆ ಸಾಮಾನ್ಯವಲ್ಲ ! ಯಾಕಂದರೆ ಮುನಿಶಾಪದಿಂದ ಪರೀಕ್ಷಿದ್ರಾಜನು ಮೃತಪಟ್ಟನು. ಮತ್ತು ನಹುಷನು ಅಜಗರನಾದನು. ಯಾದವ ಕುಲವು ಕ್ಷಣದಲ್ಲಿಯೇ ನಾಶವಾಯಿತು. ಪಾಂಡುರಾಜನು ಸ್ವಸ್ತ್ರೀಯನ್ನು ಮುಟ್ಟಲಿಕ್ಕೆ ಶಕ್ತನಾಗಲಿಲ್ಲ. ಕಾರಣ ಋಷೀಶ್ವರರಿಗೆ ಪರಮೇಶ್ವರನಂತೆ ಬೇಕಾದದ್ದನ್ನು ಮಾಡುವ ಶಕ್ತಿ ಇರುವದು. ಅಂದಬಳಿಕ ಈ ಕಾರ್ಯವನ್ನು ಮಾಡುವದು ಅಸಾಧ್ಯವಲ್ಲವೆಂದರು.

ನಂತರ ನೈಧ್ರುವಋಷಿಯು ಶಾರದೆಯನ್ನು ತನ್ನ ಹತ್ತಿರಕ್ಕೆ ಕರೆದು ಅವಳಿಗೆ ಶಿವ-ಷಡಕ್ಷರೀ ಮಂತ್ರವನ್ನು ಉಪದೇಶಿಸಿ, "ಉಮಾ-ಮಹೇಶ್ವರರ ವ್ರತವನ್ನಾಚರಿಸು; ನಿನ್ನ ಕಾರ್ಯವು ಸಿದ್ಧಿಯಾಗುವವರೆಗೂ ನಾನು ಇಲ್ಲಿಯೇ ಇರುವೆನು," ಎಂದು ಹೇಳಿ ಒಂದು ಗುಡಿಸಲನ್ನು ಕಟ್ಟಿಸಿ ಅಲ್ಲೇ ವಾಸಮಾಡಿದನು. ಶಾರದೆಯು ಒಂದು ಉತ್ತಮವಾದ ಶಿವಾಲಯವನ್ನು ನಿರ್ಮಾಣ ಮಾಡಿಸಿ ಸುವರ್ಣದಿಂದ ಉಮಾಮಹೇಶ್ವರರ ಮೂರ್ತಿಗಳನ್ನು ಮಾಡಿ ಅದೇ ದೇವಾಲಯದಲ್ಲಿ

ಸುವರ್ಣ-ಪೀಠವನ್ನಿರಿಸಿ ಮೂರ್ತಿಗಳನ್ನು ಸ್ಥಾಪಿಸಿದಳು. ನಂತರ ಋಷೀಶ್ವರ ನೆಡೆಗೆ ಹೋಗಿ ವ್ರತವನ್ನು ಯಾವ ಕಾಲದಲ್ಲಿ ಪ್ರಾರಂಭಿಸಬೇಕೆಂದು ಕೇಳಲಾಗಿ ಮುನಿಯು " ಚೈತ್ರಮಾಸದಲ್ಲಾಗಲಿ ಇಲ್ಲವೆ ಮಾರ್ಗಶೀರ್ಷ. ಶುಕ್ಲ ಪಕ್ಷದಲ್ಲಿ ಯಾಗಲಿ ಶುಭಮುಹೂರ್ತವನ್ನು ಸಾಧಿಸಿ, ಸೋಮವಾರ ಅಷ್ಟಮಿ ಅಥವಾ ಚತು ದರ್ಶಿಯಲ್ಲಿ ಪ್ರಾರಂಭಮಾಡಿ ಒಂದು ವರ್ಷ ಪರ್ಯಂತರವಾಗಿಯೂ ನಡಿಸಿ, ಹಾಗೇ ಶಿವಷಡಕ್ಷರೀ-ಮಂತ್ರವನ್ನು ಜಪಿಸು " ಎಂದು ಪೇಳಲಾಗಿ ಆದ್ದರಂತೆ ಆದರಂತೆ ಅವಳು ಶುಭಮುಹೂರ್ತದಲ್ಲಿ ವ್ರತವನ್ನಾರಂಭಿಸಿದಳು. ಪ್ರತಿದಿವಸ ಯಥಾವಿಧಿ ಪೂಜೆಯನ್ನು ಮಾಡಿ ದಂಪತಿಗಳನ್ನು ಪೂಜಿಸಿ, ಬ್ರಾಹ್ಮಣರಿಗೆ ಭೋ ಜನ ಮಾಡಿಸಿ, ತಪ್ಪದೆ ಕೀರ್ತನೆ, ಭಜನೆ, ಪುರಾಣ ಶ್ರವಣಗಳನ್ನು ಮಾಡಿ, ಮಹಾಭಕ್ತಿಯಿಂದ ಉಮಾ-ಮಹೇಶ್ವರರನ್ನು ಸ್ತೋತ್ರಮಾಡಿ ಗುರ್ವಾಜ್ಞೆಯ ಮೇರೆಗೆ ಶಯನಮಾಡುತ್ತಿದ್ದಳು. ಈಪ್ರಕಾರವಾಗಿ ಒಂದು ವರ್ಷ ಸಂಪೂರ್ಣ ವಾಗಲು, ಆವೊತ್ತು ಉದ್ಯಾಪನವನ್ನು ಮಾಡಿ, ಹನ್ನೊಂದು ನೂರು ದಂಪತಿಗ ಳನ್ನು ಪೂಜಿಸಿ ಭೋಜನ ಮಾಡಿಸಿ ಮಧ್ಯರಾತ್ರಿಯಲ್ಲಿ ಕೀರ್ತನ ಶ್ರವಣ ಮಾಡು ತ್ತಾ, ಶಾರದೆಯು ನೈಧ್ರುವಋಷಿಯ ಹತ್ತರ ಕೂತಕಾಲದಲ್ಲಿ ಅಂಬಿಕೆಯು ಪ್ರತ್ಯ ಕ್ಷವಾಗಿ ಬಂದು ಶಾರದಾ ಮತ್ತು ನೈಧ್ರುವಮುನಿಯ ಎದುರಿಗೆ ನಿಂತಳು. ಅಂಬಿ ಕೆಯು ಇವರೀರ್ವರಿಗೇನೇ ತೋರಿದಳೆ ಹೊರತು ಅನ್ಯರಿಗೆ ಕಾಣಿಸಲಿಲ್ಲ. ಜಗ ದಂಬೆಯನ್ನು ನೋಡಿದಕೂಡಲೆ ಎದ್ದು ನಮಸ್ಕರಿಸಿ ಭಕ್ತಿಯಿಂದ, " ಹೇ ಜಗ ದಂಬೇ ! ಭವಾನೀ !! ತ್ರಿಪುರಸುಂದರೀ !!! ನಿನ್ನ ನಾಮ ಸ್ಮರಣೆಯಿಂದ ಮೂಕರು ಬೃಹಸ್ಪತಿಯಂತೆ ವಾಕ್ಪಟುತ್ವವುಳ್ಳವರಾಗುವರು; ನಕ್ಷತ್ರಗಳನ್ನು ಎಣಿಸುವರು; ಕುಂಟರು ಸಹ ಉನ್ನತ ಪರ್ವತವನ್ನೇರುವರು, ದೇವೀ ! ನೀನು ಸೃಷ್ಟಿಸ್ಥಿತಿ-ಲಯಗಳಿಗೆ ಕಾರಣಳು. ನೀನೇ ಜಗದ್ವ್ಯಾಪಕಳು. ಚಂಡ—ಮುಂಡ ಮರ್ದನೀ ! ಮಹಾಂಕಾಳೀ ! ಕದಂಬವನವಾಸಿನೀ ! ಭಕ್ತರ ಮನೋಭೀಷ್ಟ ವನ್ನು ಪೂರೈಸಿ ಪುತ್ರರನ್ನು ದಯಪಾಲಿಸುತ್ತೀಯೆಂದು ಜಗದಂಬೆಯೆಂಬ ನಾಮ ವು ಪ್ರಾಪ್ತವಾಗಿರುವದು. ದಾಕ್ಷಾಯಣೀ ! ನಿನ್ನ ಅನುಗ್ರಹವೊಂದಾದರೆ ಎಂಥ ಅಘಟಿತ ಕಾರ್ಯವಾದರೂ ಘಟಿಸುವದು. ಹೇ ಸುರಗಣವಂದಿತೇ ! ಮಂದ ಸ್ಮಿತೇ !! ಈ ಭಕ್ತರನ್ನು ಉದ್ಧಾರಮಾಡು " ಎಂದು ನಾನಾಪ್ರಕಾರವಾಗಿ ಸ್ತೋತ್ರ ಮಾಡಿ ಶಾರದೆಯ ಸಕಲ ವೃತ್ತಾಂತವನ್ನು ನಿವೇದಿಸಿ, " ಭವಾನೀ ! ನನ್ನ ಮುಖದಿಂದ ಹೊರಟ ವಾಕ್ಯವನ್ನು ಸತ್ಯ ಮಾಡಬೇಕು, " ಎಂದು ನೈಧ್ರು ವನು ಬೇಡಿಕೊಳ್ಳಲಾಗಿ ಪಾರ್ವತಿಯು ಈ ರೀತಿ ಹೇಳಿದಳು.

" ಭಕ್ತಾಗ್ರೇಸರನೇ ! ಪೂರ್ವಜನ್ಮದಲ್ಲಿ ಈ ಶಾರದೆಯು ದ್ರವಿಡ ದೇಶ ದಲ್ಲಿ ಓರ್ವ ಬ್ರಾಹ್ಮಣನ ಪತ್ನಿಯಾಗಿದ್ದಳು. ಆಕಾಲದಲ್ಲಿ ಇವಳಿಗೆ ಭಾಮಿನಿ ಯೆಂದುಕರೆಯುತ್ತಿದ್ದರು. ಇವಳಿಗೆ ಓರ್ವ ಸವತಿಯಿದ್ದಳು. ಭಾಮಿನಿಯು ರೂಪದಲ್ಲಿ ರತಿಯನ್ನು ಸೋಲಿಸುತ್ತಿದ್ದದರಿಂದ ತನ್ನ ಭಾವನೆಯಿಂದಲೂ, ರೂಪ

ದಿಂದಲೂ ಪತಿಯನ್ನು ಒಲಿಸಿ ಸವತಿಯ ಮುಖವನ್ನು ಸಹ ನೋಡದಂತೆ ಮಾಡಿದ್ದಳು. ಆ ಸವತಿಯು ತನ್ನ ಮನೆಗೆ ವಲ್ಲಭನು ಬರುವದಿಲ್ಲವೆಂದು ದಿನಾಲು ಚಿಂತಿಸುತ್ತಾ, ದುಃಖಿಸುತ್ತಾ, ಅಂತ್ಯದಲ್ಲಿ ಭಾಮಿನಿಗೆ ಮುಂದಿನ ಜನ್ಮದಲ್ಲಿಯಾದರೂ ವಿಧವೆಯಾಗೆಂದು ಶಾಪವನ್ನು ಕೊಟ್ಟು ಮೃತಪಟ್ಟಳು. ನಂತರ ಆ ಊರಲ್ಲಿ ಒಬ್ಬ ಜಾರ ಪುರುಷನಿದ್ದನು. ಅವನು ಈ ಭಾಮಿನಿಯ ರೂಪ ಸೌಂದರ್ಯಗಳಿಗೆ ಮರುಳಾಗಿ ಅನ್ನ ನೀರನ್ನು ಸಹ ಬಿಟ್ಟು ಇವಳನ್ನು ಹೊಂದುವ ಸಂಧಿಯನ್ನೇ ಸಾಧಿಸುತ್ತಿದ್ದನು. ಒಂದಾನೊಂದು ದಿನ ಭಾಮಿನಿಯ ಮನೆಯಲ್ಲಿ ಇವಳ ಹೊರ್ತು ಯಾರೂ ಇಲ್ಲದ್ದನ್ನು ಕಂಡು, ಆಹಾ ! ದೇವರು ಕಾಲವನ್ನು ಸಾಧಿಸಿ ಕೊಟ್ಟನೆಂದು ಪರಮಾನಂದವನ್ನು ಪಡೆದ, ಸರ್ವಾಭರಣ ಭೂಷಿತನಾಗಿ ದೇಹಕ್ಕೆ ಚಂದನ, ಧವನ, ಜೇಲಿಯಾ, ಅಷ್ಟ-ಗಂಧ ಮೊದಲಾದ ಸುವಾಸಿಕ ಪದಾರ್ಥಗಳನ್ನು ಲೇಪಿಸಿಕೊಂಡು ಭರ್ಜರೀ ಮುಂಡಾಸವನ್ನು ಸುತ್ತಿಕೊಂಡು, ಪಟ್ಟಪೀತಾಂಬರವನ್ನುಟ್ಟು, ತಾಂಬೂಲ ಚರ್ವಣಮಾಡಿ ದರ್ಪಣದಲ್ಲಿ ಮುಖವನ್ನು ನೋಡಿ, ಎರಡನೇ ಮನ್ಮಥನೋ ಏನೋ ! ಎಂಬಂತೆ ತೋರುತ್ತಾ ತೀವ್ರವಾಗಿ ವಿಪ್ರನ ಗೃಹವನ್ನು ಪ್ರವೇಶಿಸಿ ನಕ್ಷತ್ರಗಳಂತೆ ಹೊಳೆಯುವ ಸುಂದರಾಂಗಿಯಾದ ಭಾಮಿನಿಯನ್ನು ಕಂಡು ಸ್ಮೃತಿ-ಭ್ರಾಂತನಾಗಿ ಹಸ್ತವನ್ನು ಹಿಡಿಯಲು, ಆ ತರುಣಿಯು ಸತ್ವರದಿಂದ ಹಿಂದಕ್ಕೆ ಸರಿದು ಮೂರ್ಖಾ ! ಇನ್ನೊಂದಾವರ್ತಿ ನೀನು ಇಲ್ಲಿ ಬಂದರೆ ನಿನ್ನ ಪ್ರಾಣಗಳನ್ನೇ ತೆಗೆಸುವೆನೆಂದು ಕೋಪದಿಂದ ನುಡಿಯಲು, ಆ ತರುಣ ಜಾರನು ಎಷ್ಟು ಪರಿಭಿನ್ನೈಸಿಕೊಂಡರೂ ಕುರುಡನಿಗೆ ಕಾಂತಿಯಂತೆ ನಿರರ್ಥಕವಾಯಿತು ನಂತರ ಜಾರನು ತನ್ನ ಕಾರ್ಯವು ಕೈಗೂಡಲಿಲ್ಲವೆಂದು ಚಿಂತಿಸುತ್ತಾ, ದುಃಖಿಸುತ್ತಾ ತನ್ನ ಮನೆಗೆ ಬಂದು ಎಡಬಿಡದೆ ಈ ಭಾಮಿನಿಯನ್ನು ಧ್ಯಾನಿಸುತ್ತಾ ಆಹಾರ-ನಿದ್ರಾವರ್ಜಿತನಾಗಿ ಮೃತಪಟ್ಟನು. ನಂತರ ಕೆಲವು ಕಾಲದಮೇಲೆ ಭಾಮಿನಿಯಾದರೂ ಮೃತಪಟ್ಟು ಈ ಶಾರದೆಯಾಗಿ ಹುಟ್ಟಿದಳು. ಆ ಜಾರನೇ ಈಗ ಪದ್ಮಾಕರನೆಂಬ ವಿಪ್ರನಾಗಿ ಇವಳ ಪತಿಯಾಗಿದ್ದನು. ಆ ಸುದತಿಯ ಶಾಪದಿಂದ ಈವಾಗ ಇವಳಿಗೆ ವೈಧವ್ಯ ಪ್ರಾಪ್ತವಾಯಿತು.

ಇದಂತಿರಲಿ, ನಿನ್ನ ವಚನ ಸತ್ಯವಾಗುವದಕ್ಕೋಸ್ಕರ ಒಂದು ಯುಕ್ತಿಯನ್ನು ಹೇಳುವೆನು. ಏನಂದರೆ, ಇವಳ ಪೂರ್ವಜನ್ಮದ ಗಂಡನು ದ್ರವಿಡ ದೇಶದಲ್ಲಿ ಇವಳ ರೂಪಲಾವಣ್ಯಾದಿಗಳನ್ನು ಧ್ಯಾನಿಸುತ್ತಾ ಜೀವದಿಂದಿರುವನು. ಅವನು ಪ್ರತಿದಿವಸ ರಾತ್ರಿಯಲ್ಲಿ ಸ್ವಪ್ನದಲ್ಲಿ ಬಂದು ಇವಳಿಗೆ ಸುರತ ಸುಖವನ್ನು ಕೊಡುವನು. ಅದು ಜಾಗ್ರತಕಾಲದಲ್ಲಿ ಮಾಡುವ ಕಾರ್ಯದಂತೆ ಈರ್ವರಿಗೂ ಜ್ಞಾನವಾಗುವದು. ನಂತರ ನಿನ್ನ ವಚನದಂತೆ ಶಾರದೆಗೆ ವಿಖ್ಯಾತ ಪುತ್ರನು ಹುಟ್ಟುವನೆಂದು ಗಿರಿಜೆಯು ಹೇಳಿ ಅದೃಶ್ಯಳಾದಳು. ಅಂಬಿಕೆಯ ವಚನದ ಮೇರೆಗೆ ಪ್ರತಿದಿವಸ ರಾತ್ರಿ ಸ್ವಪ್ನದಲ್ಲಿ ಶಾರದೆಯು ಪೂರ್ವದ ಪತಿಯಿಂದ ಕೂಡಿ ರತಿಕೇಳಿಯನ್ನು ಅನುಭವಿಸುತ್ತಾ, ಕೆಲವು ದಿನಗಳಲ್ಲಿ ಗರ್ಭ ಧರಿಸಿದಳು.

ಗರ್ಭಚಿನ್ಹವು ದಿನದಿನಕ್ಕೆ ಅಭಿವೃದ್ಧಿಯಾಗುತ್ತಿರುವದನ್ನು ಕಂಡು ಪುರಜನರು ನಿಂದೆಮಾಡಲಾರಂಭಿಸಿದರು. ಕೆಲವರು ಇವಳನ್ನು ಕಂಡು, ಇದೇನು ಆಶ್ಚರ್ಯ! ಸ್ವಪ್ನದಲ್ಲಿ ಗಂಡನು ಬರುವದೆಂದರೇನು ? ಗರ್ಭವನ್ನು ಧರಿಸುವದೆಂದರೇನು; ಇವಳು ಜಾರಕೃತ್ಯಮಾಡಿ ಪಾರ್ವತಿಯ ವರದಿಂದ ಹೀಗಾಗಿರುವದೆಂದು ಹೇಳು ವಳಲ್ಲ ! ಎಂದು ನಗುತ್ತಿದ್ದರು. ಇಷ್ಟರಲ್ಲಿ ಆಕಾಶವಾಣಿಯು ಶಾರದೆಯ ಗರ್ಭವು ಸತ್ಯವೆಂದು ನುಡಿಯಲಾಗಿ, ಕೆಲವರು ಕೇಳಿ ಇದು ಆಕಾಶವಾಣಿಯಲ್ಲ ! ಕಪಟ ವಾಣಿಯೆಂದರು ಕೆಲವರು, ಹಾಗೆ ಅನ್ನಕೂಡದು; ಪರಮೇಶ್ವರನ ಚರಿತ್ರೆಯು ಹೇಳಲಸದಳವಿರುವದು ! ಅವನು ಅಘಟಿತ-ಘಟನಾಪಟುತ್ವದ ಮಹಿಮೆಯುಳ್ಳ ವನಿರುವನು. ನೋಡಿರಿ ! ನೀರಿನಲ್ಲಿ ಬಿದ್ದ ವಿಭಾಂಡಕ ಋಷಿಯ ರೇತಸ್ಸನ್ನು ಹರಿಣಿಯು ಕುಡಿದು, ಗರ್ಭಧರಿಸಿ ಋಷ್ಯಶೃಂಗನನ್ನು ಪಡೆಯಲಿಲ್ಲವೇ ? ಜಲದಲ್ಲಿ ಬಿದ್ದ ಧೂಮಕೇತು ರಾಜನ ವೀರ್ಯವನ್ನು ಓರ್ವ ವೇಶ್ಯೆಯು ಕುಡಿದು ಪುತ್ರರನ್ನು ಪಡೆಯಲಿಲ್ಲವೇ ? ಸಮುದ್ರದಲ್ಲಿ ಬಿದ್ದ ಮಾರುತಿಯ ಎಂಜಲನ್ನು ಮೊಸಳೆಯು ತಿಂದು ಮಕರಧ್ವಜನನ್ನು ಪಡೆಯಲಿಲ್ಲವೇ ? ಆದ್ದರಿಂದ ಪರಮೇಶ್ವರನ ಕೃತಿಯು ಹೇಗಿದೆ ! ಎಂಬುವದು ತಿಳಿಯುವದಿಲ್ಲ. ಪಾರ್ವತೀಶನ ಅನುಗ್ರಹನಾದರೆ ಕಲ್ಲು ಗೊಂಬೆಗಳು ಸಹ ಚಲಿಸುವವು ! ಇವಳಾದರೂ ಸ್ವಪ್ನಕೇಳಿಯಿಂದ ಯಾಕೆ ಗರ್ಭ ವನ್ನು ಧರಿಸಿರಬಾರದು ? ಎಂದು ನಾನಾಪರಿಯಿಂದ ತಿಳಿಹೇಳಿದರು. ಮೂರ್ಖರು ಕೇಳದೆ, ಮೇಲಿಂದಮೇಲೆ ಶಾರದೆಗೆ ದೂಷಣಗಳನ್ನೇ ಮಾಡುತ್ತಿದ್ದರು. ಅಷ್ಟರಲ್ಲಿ ಆಕಾಶವಾಣಿಯು ಶಾರದೆಯ ಗರ್ಭವು ಸತ್ಯವು ! ಇವಳು ಮಹಾ ಪತಿವ್ರತೆ !! ಇವಳನ್ನು ಯಾರು ದೂಷಿಸುವರೋ ಅವರ ನಾಲಿಗೆಯು ಕತ್ತರಿಸಿ ಬೀಳುವದು!! ಎಂದು ನುಡಿಯಲಾಗಿ ಕೆಲವು ಮಂದಮತಿಗಳು ನಿಂದ್ಯವಾಣಿಯೆಂದು ಪುನಃ ದೂಷಿಸಲು, ಅವರ ನಾಲಿಗೆಗಳು ಕತ್ತರಿಸಿ ಭೂಮಿಯಲ್ಲಿ ಬಿದ್ದವು

ಈ ಅದ್ಭುತವನ್ನು ನೋಡಿ ಸರ್ವರೂ ಗಾಬರಿಯಾಗಿ ಶಾರದೆಯ ಹತ್ತಿರ ಬಂದು, " ಅಮ್ಮಾ ! ನೀನು ಮಹಾ ಪತಿವ್ರತೆ, ನಿನ್ನ ಗರ್ಭವು ಸತ್ಯವು. ನಾವು ಅನ್ಯಾಯದಿಂದ ನುಡಿದೆವು ! ಕ್ಷಮಮಾಡು !! " ಎಂದು ನಮಸ್ಕರಿಸಿ ತಮ್ಮತಮ್ಮ ಮನೆಗಳಿಗೆ ತಿರುಗಿದರು. ಮುಂದೆ ಶಾರದೆಯು ಪುತ್ರರತ್ನನನ್ನು ಪ್ರಸೂತಳಾದಳು. ಅವನಿಗೆ ಜನರೆಲ್ಲರೂ ಶಾರದಾನಂದನನೆಂಬ ಹೆಸರನ್ನಿಟ್ಟರು. ಇವನು ಉಪನ ಯನವಾದ ಕೂಡಲೆ ಎಂಟು ವರ್ಷದೊಳಗೆ ವೇದಶಾಸ್ತ್ರ, ಪುರಾಣಗಳಲ್ಲಿ ಪಾರಂಗ ತನಾಗಿ ತಪಸ್ಸುಮಾಡಿ ಶ್ರೀ ಸಾಂಬನನ್ನು ಒಲಿಸಿದನು. ಮುಂದೆ ಶಾರದೆಯು ಗೋಕರ್ಣ-ಯಾತ್ರಾರ್ಥವಾಗಿ ಹೊರಟ ಜನರನ್ನು ಕಂಡು ತಾನು ಮಗನೊಂದಿಗೆ ಮಹಾಬಳೇಶ್ವರನ ದರ್ಶನಾರ್ಥವಾಗಿ ಗೋಕರ್ಣಕ್ಕೆ ಬಂದಳು. ಅಲ್ಲಿಗೆ ಪೂರ್ವ ಜನ್ಮದ ಪತಿಯಾದ ದ್ರವಿಡ ಬ್ರಾಹ್ಮಣನೂ ಬಂದಿದ್ದನು, ಈರ್ವರೂ ಪರಸ್ಪ ರಾಗಿ ತಮ್ಮ ಚಿನ್ಹಗಳನ್ನು ತಿಳಿದುಕೊಂಡರು. ನಂತರ ಶಾರದೆಯು ಪಾರ್ವತಿಯ ವಚನವನ್ನು ನೆನೆದಳು. ಏನಂದರೆ " ನೀನು ಗೋಕರ್ಣ ಕ್ಷೇತ್ರಕ್ಕೆ ಹೋದಕಾ

ದಲ್ಲಿ ನಿನಗೆ ಸ್ವಪ್ನದಲ್ಲಿ ಬರುವ ಪತಿಯು ದರ್ಶನವಾಗುವದು. ಅಲ್ಲಿ ನಿನ್ನ ಪುತ್ರ ನನ್ನು ಆವನಿಗೆ ಒಪ್ಪಿಸಿ ಉಮಾ.ಮಹೇಶ್ವರರ ವ್ರತದ ಅರ್ಧ ಪುಣ್ಯವನ್ನು ಕೊಟ್ಟು ನೀನಾದರೂ ಅವನ ಸಂಗಡಲೇ ಗಮನವಾಡು. ಆದರೆ ಅವನಿಂದ ಕೂಡಿ ಸುರತ ಸುಖವನ್ನನುಭೋಗಿಸದೆ ಬ್ರಹ್ಮಚರ್ಯ ವ್ರತದಿಂವ ಇದ್ದು ಅಂತ್ಯದಲ್ಲಿ ನನ್ನ ಲೋಕಕ್ಕೆ ಬರುವಿಯಂತೆ' ಇದನ್ನು ಧ್ಯಾನಿಸಿ ದ್ರವಿಡ ಬ್ರಾಹ್ಮಣನ ಹತ್ತರಬಂದು ವಲ್ಲಭನೇ ! ನಿನ್ನ ಪುತ್ರನನ್ನು ತೆಗೆದುಕೋ ! ಎಂದು ಕೊಟ್ಟು, ತಾನಾದರೂ ಅವ ನಿಂದ ಕೂಡಿ ದ್ರವಿಡ ದೇಶಕ್ಕೆ ಬಂದು ಬ್ರಹ್ಮಚರ್ಯವ್ರತದಿಂದ ಇದ್ದಳು. ದಿನಾಲು ಪತಿಯು ದರ್ಶನವನ್ನು ದೂರದಿಂದಲೇ ತೆಗೆದುಕೊಳ್ಳುತ್ತಿದ್ದಳು. ಮುಂದೆ ಶಾರದಾನಂದನನು ಪ್ರಸಿದ್ಧನಾಗಿ ವಿಶೇಷ ತಪಸ್ಸು ವಾಡಿದನು. ಆವನು ಈಗಿನ ಜನರಂತೆ ಹೆಂಡತಿಯ ಮಾತನ್ನು ನಂಬಿ ತಂದೆ-ತಾಯಿಗಳಿಗೆ ದುಃಖ ಕೊಡದೆ ಮಾತಾ-ಪಿತರನ್ನು ಸಲಹುತ್ತಾ, ಪಾರ್ವತೀ-ಪರಮೇಶ್ವರರನ್ನು ಧ್ಯಾನಿಸುತ್ತಿ ದ್ದನು ಕೆಲವು ದಿನಗಳಾಗಲು ದ್ರವಿಡ ಬ್ರಾಹ್ಮಣನು ಮೃತನಾದನು. ಶಾರದೆಯು ಪತಿಯಕೂಡ ಸಹಗಮನವಾಡಿ. ಇಬ್ಬರೂ ಕೈಲಾಸಕ್ಕೆ ತೆರಳಿದರು.

೧೦-ನೇ ಅಧ್ಯಾಯ ಸಂಪೂರ್ಣವಾದುದು.



ಹನ್ನೊಂದನೆಯ ಅಧ್ಯಾಯ ಪ್ರಾರಂಭವು.

## ರಾಜಾಭದ್ರಸೇನ ಮತ್ತು ವೇಶ್ಯಾ ಮಹಾನಂದೆ ಇವರ ಕಥೆ.



ಯಾ ಮನುಷ್ಯನು ಸಹಸ್ರ ರುದ್ರಾಕ್ಷಿಗಳನ್ನು ಧರಿಸುವನೋ, ಆತನನ್ನು ಇಂದ್ರಾದಿ ದೇವತೆಗಳು ಸಹ ನಮಸ್ಕರಿಸುವರು. ಅವನೇ ಪರಮೇಶ್ವರನೆಂಬದಕ್ಕೆ ಸಂದೇಹವೇ ಇಲ್ಲ. ಶಿಖೆಯಲ್ಲಿ ಒಂದು, ಶಿರದ ಸುತ್ತುಮುತ್ತಲೂ ಇಪ್ಪತ್ತನಾಲ್ಕು, ಭುಜಗಳಲ್ಲಿ ಹದಿನಾರು ಹದಿನಾರು, ಕರ್ಣಗಳಲ್ಲಿ ಆರಾರು, ಕಂಠದಲ್ಲಿ ನೂರಾ ಯೆಂಟು ರುದ್ರಾಕ್ಷಿಗಳನ್ನು ಧರಿಸಬೇಕು. ಏಕಮುಖಿ, ಪಂಚಮುಖಿ, ಷಣ್ಮುಖಿ ಅಷ್ಟಮುಖಿ, ಚತುರ್ದಶಮುಖಿ ರುದ್ರಾಕ್ಷಿಗಳು ಬಹು ಮಂಗಳದಾಯಕವು; ರುದ್ರಾ ಕ್ಷಧಾರಣ ಪುಣ್ಯಕ್ಕೆ ಸಮಾನವಾದದು ಜಗತ್ತಿನಲ್ಲಿ ಯಾವುದೂ ಇಲ್ಲವೆಂದರೆ ತಪ್ಪೇನು ?

ಪೂರ್ವದಲ್ಲಿ ವನೋಪವನಗಳಿಂದ ನಿಬಿಡವಾಗಿ ಸಕಲೈಶ್ವರ್ಯ ಭರಿತ ವಾದ ಕಾಶ್ಮೀರನೆಂಬ ದೇಶದಲ್ಲಿ ಸುಗುಣಗಣ-ಶೋಭಿತನಾದ ಭದ್ರಸೇನನೆಂಬ

ಗರ್ಭಚಿನ್ಹವು ದಿನದಿನಕ್ಕೆ ಅಭಿವೃದ್ಧಿಯಾಗುತ್ತಿರುವದನ್ನು ಕಂಡು ಪುರಜನ
ನಿಂದೆಮಾಡಲಾರಂಭಿಸಿದರು. ಕೆಲವರು ಇವಳನ್ನು ಕಂಡು, ಇದೇನು ಆಶ್ಚರ್ಯ!
ಸ್ವಪ್ನದಲ್ಲಿ ಗಂಡನು ಬರುವದೆಂದರೇನು? ಗರ್ಭವನ್ನು ಧರಿಸುವದೆಂದರೇನು!
ಇವಳು ಜಾರಕೃತ್ಯಮಾಡಿ ಪಾರ್ವತಿಯ ವರದಿಂದ ಹೀಗಾಗಿರುವದೆಂದು ಹೇ
ವಳಲ್ಲ! ಎಂದು ನಗುತ್ತಿದ್ದರು. ಇಷ್ಟರಲ್ಲಿ ಆಕಾಶವಾಣಿಯು ಶಾರದೆಯ ಗರ್ಭ
ವು ಸತ್ಯವೆಂದು ನುಡಿಯಲಾಗಿ, ಕೆಲವರು ಕೇಳಿ ಇದು ಆಕಾಶವಾಣಿಯಲ್ಲ! ಕಪ
ವಾಣಿಯೆಂದರು ಕೆಲವರು, ಹಾಗೆ ಅನ್ನಕೂಡದು; ಪರಮೇಶ್ವರನ ಚರಿತ್ರೆಯು
ಹೇಳಲಸದಳವಿರುವದು! ಅವನು ಅಘಟಿತ-ಘಟನಾಪಟುತ್ವದ ಮಹಿಮೆಯುಳ್ಳ
ವನಿರುವನು. ನೋಡಿರಿ! ನೀರಿನಲ್ಲಿ ಬಿದ್ದ ವಿಭಾಂಡಕ ಋಷಿಯ ರೇತಸ್ಸನ್ನು
ಹರಿಣಿಯು ಕುಡಿದು, ಗರ್ಭಧರಿಸಿ ಋಷ್ಯಶೃಂಗನನ್ನು ಪಡೆಯಲಿಲ್ಲವೇ? ಜಲದಲ್ಲಿ
ಬಿದ್ದ ಧೂಮಕೇತು ರಾಜನ ವೀರ್ಯವನ್ನು ಓರ್ವ ವೇಶ್ಯೆಯು ಕುಡಿದು ಪುತ್ರರನ್ನು
ಪಡೆಯಲಿಲ್ಲವೇ? ಸಮುದ್ರದಲ್ಲಿ ಬಿದ್ದ ಮಾರುತಿಯ ಎಂಜಲನ್ನು ಮೊಸಳೆಯು
ತಿಂದು ಮಕರಧ್ವಜನನ್ನು ಪಡೆಯಲಿಲ್ಲವೇ? ಆದ್ದರಿಂದ ಪರಮೇಶ್ವರನ ಕೃತಿಯು
ಹೇಗಿದೆ! ಎಂಬುವದು ತಿಳಿಯುವದಿಲ್ಲ. ಪಾರ್ವತೀಶನ ಅನುಗ್ರಹನಾದರೆ ಕಲ್ಲು
ಗೊಂಬೆಗಳು ಸಹ ಚಲಿಸುವವು! ಇವಳಾದರೂ ಸ್ವಪ್ನಕೇಳಿಯಿಂದ ಯಾಕೆ ಗರ್ಭ
ವನ್ನು ಧರಿಸಿರಬಾರದು? ಎಂದು ನಾನಾಪರಿಯಿಂದ ತಿಳಿಹೇಳಿದರು. ಮೂರ್ಖರು
ಕೇಳದೆ, ಮೇಲಿಂದಮೇಲೆ ಶಾರದೆಗೆ ದೂಷಣಗಳನ್ನೇ ಮಾಡುತ್ತಿದ್ದರು. ಆಷ್ಟರಲ್ಲಿ
ಆಕಾಶವಾಣಿಯು ಶಾರದೆಯ ಗರ್ಭವು ಸತ್ಯವು! ಇವಳು ಮಹಾ ಪತಿವ್ರತೆ!!
ಇವಳನ್ನು ಯಾರು ದೂಷಿಸುವರೋ ಅವರ ನಾಲಿಗೆಯು ಕತ್ತರಿಸಿ ಬೀಳುವದು!
ಎಂದು ನುಡಿಯಲಾಗಿ ಕೆಲವು ಮಂದಮತಿಗಳು ನಿಂದ್ಯವಾಣಿಯೆಂದು ಪುನಃ
ದೂಷಿಸಲು, ಅವರ ನಾಲಿಗೆಗಳು ಕತ್ತರಿಸಿ ಭೂಮಿಯಲ್ಲಿ ಬಿದ್ದವು

ಈ ಅದ್ಭುತವನ್ನು ನೋಡಿ ಸರ್ವರೂ ಗಾಬರಿಯಾಗಿ ಶಾರದೆಯ ಹತ್ತಿರ
ಬಂದು, “ಅಮ್ಮಾ! ನೀನು ಮಹಾ ಪತಿವ್ರತೆ, ನಿನ್ನ ಗರ್ಭವು ಸತ್ಯವು. ನಾವು
ಅನ್ಯಾಯದಿಂದ ನುಡಿದೆವು! ಕ್ಷಮಮಾಡು!!” ಎಂದು ನಮಸ್ಕರಿಸಿ ತಮ್ಮತಮ್ಮ
ಮನೆಗಳಿಗೆ ತಿರುಗಿದರು. ಮುಂದೆ ಶಾರದೆಯು ಪುತ್ರರತ್ನನನ್ನು ಪ್ರಸೂತಳಾದಳು.
ಅವನಿಗೆ ಜನರೆಲ್ಲರೂ ಶಾರದಾನಂದನನೆಂಬ ಹೆಸರನ್ನಿಟ್ಟರು. ಇವನು ಉಪನ
ಯನವಾದ ಕೂಡಲೆ ಎಂಟು ವರ್ಷದೊಳಗೆ ವೇದಶಾಸ್ತ್ರ ಪುರಾಣಗಳಲ್ಲಿ ಪಾರಂಗ
ತನಾಗಿ ತಪಸ್ಸುಮಾಡಿ ಶ್ರೀ ಸಾಂಬನನ್ನು ಒಲಿಸಿದನು. ಮುಂದೆ ಶಾರದೆಯು
ಗೋಕರ್ಣ-ಯಾತ್ರಾರ್ಥವಾಗಿ ಹೊರಟ ಜನರನ್ನು ಕಂಡು ತಾನು ಮಗನೊಂದಿಗೆ
ಮಹಾಬಳೇಶ್ವರನ ದರ್ಶನಾರ್ಥವಾಗಿ ಗೋಕರ್ಣಕ್ಕೆ ಬಂದಳು. ಅಲ್ಲಿಗೆ ಪೂರ್ವ
ಜನ್ಮದ ಪತಿಯಾದ ದ್ರವಿಡ ಬ್ರಾಹ್ಮಣನೂ ಬಂದಿದ್ದನು, ಈರ್ವರೂ ಪರಸ್ಪರ
ರಾಗಿ ತಮ್ಮ ಚಿನ್ಹಗಳನ್ನು ತಿಳಿದುಕೊಂಡರು. ನಂತರ ಶಾರದೆಯು ಪಾರ್ವತಿಯ
ವಚನವನ್ನು ನೆನೆದಳು. ಏನೆಂದರೆ ‘ ನೀನು ಗೋಕರ್ಣ ಕ್ಷೇತ್ರಕ್ಕೆ ಹೋದರೆ

ದಲ್ಲಿ ನಿನಗೆ ಸ್ವಪ್ನದಲ್ಲಿ ಬರುವ ಪತಿಯು ದರ್ಶನವಾಗುವದು. ಅಲ್ಲಿ ನಿನ್ನ ಪುತ್ರನನ್ನು ಅವನಿಗೆ ಒಪ್ಪಿಸಿ ಉಮಾಮಹೇಶ್ವರರ ವ್ರತದ ಅರ್ಧ ಪುಣ್ಯವನ್ನು ಕೊಟ್ಟು ನೀನಾದರೂ ಅವನ ಸಂಗಡಲೇ ಗಮನಮಾಡು. ಆದರೆ ಅವನಿಂದ ಕೂಡಿ ಸುರತ ಸುಖವನ್ನನುಭೋಗಿಸದೆ ಬ್ರಹ್ಮಚರ್ಯ ವ್ರತದಿಂದ ಇದ್ದು ಅಂತ್ಯದಲ್ಲಿ ನನ್ನ ಲೋಕಕ್ಕೆ ಬರುವಿಯಂತೆ' ಇದನ್ನು ಧ್ಯಾನಿಸಿ ದ್ರವಿಡ ಬ್ರಾಹ್ಮಣನ ಹತ್ತರಬಂದು ವಲ್ಲಭನೇ ! ನಿನ್ನ ಪುತ್ರನನ್ನು ತೆಗೆದುಕೋ ! ಎಂದು ಕೊಟ್ಟು, ತಾನಾದರೂ ಅವನಿಂದ ಕೂಡಿ ದ್ರವಿಡ ದೇಶಕ್ಕೆ ಬಂದು ಬ್ರಹ್ಮಚರ್ಯವ್ರತದಿಂದ ಇದ್ದಳು. ದಿನಾಲು ಪತಿಯ ದರ್ಶನವನ್ನು ದೂರದಿಂದಲೇ ತೆಗೆದುಕೊಳ್ಳುತ್ತಿದ್ದಳು. ಮುಂದೆ ಶಾರದಾನಂದನನು ಪ್ರಸಿದ್ಧನಾಗಿ ವಿಶೇಷ ತಪಸ್ಸು ಮಾಡಿದನು. ಅವನು ಈಗಿನ ಜನರಂತೆ ಹೆಂಡತಿಯ ಮಾತನ್ನು ನಂಬಿ ತಂದೆ-ತಾಯಿಗಳಿಗೆ ದುಃಖ ಕೊಡದೆ ಮಾತಾ-ಪಿತರನ್ನು ಸಲಹುತ್ತಾ, ಪಾರ್ವತೀ-ಪರಮೇಶ್ವರರನ್ನು ಧ್ಯಾನಿಸುತ್ತಿದ್ದನು ಕೆಲವು ದಿನಗಳಾಗಲು ದ್ರವಿಡ ಬ್ರಾಹ್ಮಣನು ಮೃತನಾದನು. ಶಾರದೆಯು ಪತಿಯ ಕೂಡ ಸಹಗಮನಮಾಡಿ ಇಬ್ಬರೂ ಕೈಲಾಸಕ್ಕೆ ತೆರಳಿದರು.

೧೦-ನೇ ಅಧ್ಯಾಯ ಸಂಪೂರ್ಣವಾದುದು.



## ಹನ್ನೊಂದನೆಯ ಅಧ್ಯಾಯ ಪ್ರಾರಂಭವು.

# ರಾಜಾಭದ್ರಸೇನ ಮತ್ತು ವೇಶ್ಯಾ ಮಹಾನಂದೆ ಇವರ ಕಥೆ.

ಯಾ ಮನುಷ್ಯನು ಸಹಸ್ರ ರುದ್ರಾಕ್ಷಿಗಳನ್ನು ಧರಿಸುವನೋ, ಆತನನ್ನು ಇಂದ್ರಾದಿ ದೇವತೆಗಳು ಸಹ ಮನ್ನಿಸುವರು. ಅವನೇ ಪರಮೇಶ್ವರನೆಂಬದಕ್ಕೆ ಸಂದೇಹವೇ ಇಲ್ಲ. ಶಿಖೆಯಲ್ಲಿ ಒಂದು, ಶಿರದ ಸುತ್ತುಮುತ್ತಲೂ ಇಪ್ಪತ್ತುನಾಲ್ಕು, ಭುಜಗಳಲ್ಲಿ ಹದಿನಾರು ಹದಿನಾರು, ಕರ್ಣಗಳಲ್ಲಿ ಆರಾರು, ಕಂಠದಲ್ಲಿ ನೂರಾಯೆಂಟು ರುದ್ರಾಕ್ಷಿಗಳನ್ನು ಧರಿಸಬೇಕು. ಏಕಮುಖಿ, ಪಂಚಮುಖಿ, ಷಣ್ಮುಖಿ ಅಷ್ಟಮುಖಿ, ಚತುರ್ದಶಮುಖಿ ರುದ್ರಾಕ್ಷಿಗಳು ಬಹು ಮಂಗಳದಾಯಕವು; ರುದ್ರಾಕ್ಷಧಾರಣ ಪುಣ್ಯಕ್ಕೆ ಸಮಾನಾದದು ಜಗತ್ತಿನಲ್ಲಿ ಯಾವುದೂ ಇಲ್ಲವೆಂದರೆ ತಪ್ಪೇನು ?

ಪೂರ್ವದಲ್ಲಿ ವನೋಪವನಗಳಿಂದ ನಿಬಿಡವಾಗಿ ಸಕಲೈಶ್ವರ್ಯ ಭರಿತವಾದ ಕಾಶ್ಮೀರವೆಂಬ ದೇಶದಲ್ಲಿ ಸುಗುಣಗಣ-ಶೋಭಿತನಾದ ಭದ್ರಸೇನನೆಂಬ

ರಾಜನು ಸಕಲಕಲಾ-ವಲ್ಲಭನಾದ ಓರ್ವ ಮಂತ್ರಿಯೊಂದಿಗೆ ರಾಜ್ಯಭಾರ ಮಾಡುತ್ತಿದ್ದನು. ರಾಜನು ಮಾಡುವ ಪುಣ್ಯಕೃತಿಗಳಿಂದ ಯಾವತ್ತೂ ಪ್ರಜೆಗಳು ರಾಜನಿಗೆ ಕಲ್ಯಾಣವಾಗಲೆಂದು ಹರಸುತ್ತಿದ್ದರು. ಪ್ರಪಂಚದಲ್ಲಿ ಪತಿವ್ರತೆಯಾದ ಹೆಂಡತಿಯೂ, ಸತ್ಪುತ್ರನೂ, ರೋಗರಹಿತವಾದ ಶರೀರವೂ, ವಿದ್ಯೆಯೂ, ಧನವೂ, ಸನ್ಮಾರ್ಗವರ್ತನವೂ, ಉತ್ತಮ ಬಂಧುಗಳೂ, ಇವೆಲ್ಲವು ರಾಜನಲ್ಲಿ ನೆಲೆಗೊಂಡಿದ್ದವು. ಕೆಲವು ದಿನಗಳಾದ ನಂತರದಲ್ಲಿ ಪರಮೇಶ್ವರನ ಅನುಗ್ರಹದಿಂದ ಭದ್ರಸೇನ ರಾಜನಿಗೂ ಮತ್ತು ಅವನ ಮಂತ್ರಿಗೂ ಒಬ್ಬೊಬ್ಬ ಪುತ್ರನು ಜನಿಸಿದನು. ಮಗನು ಹುಟ್ಟಿದನೆಂಬ ವರ್ತಮಾನವನ್ನು ಕೇಳಿ ಈರ್ವರೂ ಊರಲ್ಲಿ ಬ್ರಾಹ್ಮಣರಿಗೂ, ಇತರರಿಗೂ ಅನೇಕ ದಾನ-ಧರ್ಮಗಳನ್ನು ಮಾಡಿ ಸಕಲರನ್ನು ಸಂತೋಷಪಡಿಸಿದರು. ದಿನದಿನಕ್ಕೆ ಉಭಯ ಬಾಲಕರು ಬಿದಿಗೆಯ ಚಂದ್ರನಂತೆ ಬೆಳೆಯಲಾರಂಭಿಸಲು ರಾಜ ಮಂತ್ರಿಗಳು ಹುಡುಗರ ರೂಪಕ್ಕೆ ಮರುಳಾಗಿ, ಪುತ್ರಪ್ರೇಮದಿಂದ ಅನೇಕಾಭರಣಗಳನ್ನೂ, ಉಡಿಗೆ-ತೊಡಿಗೆಗಳನ್ನೂ ಇರಿಸಿ ಬಾಲಲೀಲೆಯನ್ನು ನೋಡಬೇಕೆಂಬುವಷ್ಟರಲ್ಲಿಯೇ ಆ ಬಾಲಕರು ಮೈಮೇಲಿನ ಆಭರಣಗಳನ್ನು ಒತ್ತಟ್ಟಿಗೆ ಬಿಸುಟಿ ಕೊರಳಲ್ಲಿ ರುದ್ರಾಕ್ಷಮಾಲೆಯನ್ನು ಧರಿಸಿ, ಭಸ್ಮವನ್ನು ಮೈಯಲ್ಲಿ ಲೇಪಿಸಿಕೊಂಡು, ಒಂದು ಏಕಾಂತ ಸ್ಥಳದಲ್ಲಿ ಹೋಗಿ ಕುಳಿತರು. ಬಾಲಕರ ಈ ಕೃತಿಯನ್ನು ನೋಡಿ ಉಭಯತರಿಗೂ ಆಶ್ಚರ್ಯವಾಯಿತು. ದಿನಾಲು ಈ ಬಾಲಕರು ಹೀಗೆ ಮಾಡುವದನ್ನು ಕಂಡು, ರಾಜಮಂತ್ರಿಗಳು ಅನೇಕ ಪ್ರಯತ್ನ ಮಾಡಿ ಬಾಲಕರಿಗೆ ಆಭರಣಗಳನ್ನು ಇರಿಸಿದಾಗ್ಯೂ ನಿರರ್ಥಕವಾಯಿತು. ಇದರಿಂದರಾಜಮಂತ್ರಿಗಳು ಚಿಂತಾಸಾಗರದಲ್ಲಿ ಮುಳುಗಿದರು.

ಒಂದಾನೊಂದು ದಿವಸ ತ್ರಿಕಾಲಜ್ಞಾನಿಯಾದ, ಪ್ರತಿಸೃಷ್ಟಿ ಮಾಡಲಿಕ್ಕೆ ಯೋಗ್ಯನಾದ ಮತ್ತು ಭದ್ರಸೇನರಾಜನ ನಿಜ ಪುರೋಹಿತನಾದ ಪರಾಶರ ಮಹರ್ಷಿಯು ಶಿಷ್ಯಗಣರೊಂದಿಗೆ ಯುಕ್ತನಾಗಿ ತನ್ನ ಮಂದಿರಕ್ಕೆ ಬಂದದ್ದನ್ನು ಕಂಡು, ಭದ್ರಸೇನರಾಜನು ಯೋಗ್ಯ ಸನ್ಮಾನಮಾಡಿ, ಸಿಂಹಾಸನದ ಮೇಲೆ ಕುಳ್ಳಿರಿಸಿ, ಉಭಯಬಾಲಕರನ್ನು ಮುನಿಯ ಪಾದಗಳಮೇಲೆ ಹಾಕಿ ತಾನು ಕೈಜೋಡಿಸಿ “ಗುರುವೇ ! ನನ್ನ ಉಭಯ ಬಾಲಕರು, ರಾಜರಿಗೆ ಯೋಗ್ಯವಾದ ಆಭರಣಗಳನ್ನಿಡದೆ ರುದ್ರಾಕ್ಷ-ಭಸ್ಮಗಳನ್ನು ಧರಿಸಿ, ಹಗಲಿರುಳು ಶಿವಧ್ಯಾನದಲ್ಲಿ ತತ್ಪರರಾಗಿರುವರು. ಇಲ್ಲದೆ ಸಕಲ ಭೋಗ ಪದಾರ್ಥಗಳಲ್ಲಿ ವಿರಕ್ತರಾಗಿರುವರು. ಇದರ ಕಾರಣವನ್ನು ದಯಮಾಡಿ ನಿವೇದಿಸಬೇಕು. ” ಎಂದು ಬೇಡಿಕೊಳ್ಳಲಾ ಮುನಿಪನು ಸೂರ್ಯಚಂದ್ರರಂತೆ ಕಾಂತಿಯುಕ್ತರಾದ ಆ ಬಾಲಕರ ಮುಖವನ್ನು ಚೆನ್ನಾಗಿ ನೋಡಿ ಪರಮಾನಂದಭರಿತನಾಗಿ, ‘ ಎಲೈ ರಾಜನೇ ! ಈ ಬಾಲಕರು ಇಂಥ ಶಿವಭಕ್ತರಾಗಲಿಕ್ಕೆ ಕಾರಣವಾದ ಇವರ ಪೂರ್ವ ವೃತ್ತಾಂತವನ್ನು ಕೇಳು !” ಎಂದು ಹೇಳತೊಡಗಿದನು.

ಕಾಶ್ಮೀರದೇಶದೊಳಗೆ ನಂದಿಗ್ರಾಮವೆಂಬ ಪಟ್ಟಣದೊಳಗೆ ಧನಧಾನ್ಯಗಳಿಂದ ಸಮೃದ್ಧಿಯಾದ ಒಂದು ಗೃಹದಲ್ಲಿ ಮಹಾಸುಂದರ ಸುಕುಮಾರಿಯಾದ, ನವಯೌವನದಿಂದ ಪರಿಪೂರ್ಣಳಾದ, ಎರಡನೇ ರತಿಯಂತೆ ತೋರುವ ಮಹಾನಂದಾ ಎಂಬ ಪಾತರದವಳು ತಾಯಿ ಮತ್ತು ಓರ್ವ ಅಣ್ಣನಿಂದ ಕೂಡಿಕೊಂಡು ವಾಸಮಾಡುತ್ತಿದ್ದಳು. ಇವಳ ರೂಪ-ಗಾನ-ಹಾವ-ಭಾವಗಳಿಗೆ ಮರುಳಾಗಿ, ಎಷ್ಟೋ ರಾಜರು ಪಂಚಶರನಿಂದ ಪೀಡಿತರಾಗಿ ಇವಳ ಮನೆಯ ಬಾಗಿಲನ್ನು ಕಾಯುತ್ತಿದ್ದರು ಇವಳು ಜಾತಿಯಲ್ಲಿ ಪಾತರದವಳಾದರೂ ನಂಬಿದ ಪುರುಷರನ್ನೇ ಅನುಸರಿಸಿ, ಮಹಾ ಪತಿವ್ರತೆ ಧರ್ಮಪರಾಯಣೆ ಆಗಿದ್ದಳು. ಮತ್ತು ಶಿವರಾತ್ರಿ, ಸೋಮವಾರ, ಪ್ರದೋಷ ಮೊದಲಾದ ವ್ರತಗಳನ್ನು ಮಾಡುತ್ತಾ, ಬ್ರಾಹ್ಮಣರಿಂದ ಅಭಿಷೇಕವನ್ನ ಮಾಡಿಸುತ್ತಾ, ಲಕ್ಷ ಬಿಲ್ವಗಳನ್ನು ಏರಿಸುತ್ತಾ, ಕೋಟಿ ಲಿಂಗಗಳನ್ನು ಪೂಜಿಸುತ್ತಾ, ದಿನಾಲು ಶಿವಧ್ಯಾನ ಪರಾಯಣಳಾಗಿದ್ದಳು. ಅಲ್ಲದೆ, ಯಾಚಕರಿಗೆ ತೃಪ್ತರಾಗುವಂತೆ ಧನವನ್ನು ಕೊಡುತ್ತಿದ್ದಳು. ಮತ್ತು ಒಂದು ಕೋಳಿಯನ್ನೂ, ಒಂದು ಮರ್ಕಟವನ್ನೂ ಸಾಕಿ ಅವುಗಳ ಕೊರಳಿನಲ್ಲಿ ರುದ್ರಾಕ್ಷಿ ಮಾಲೆಗಳನ್ನು ಹಾಕಿ ಅವುಗಳಿಗೆ ಕುಣಿಯಲಿಕ್ಕೆ ಕಲಿಸಿದಳು. ಅವು ಶಿವಲಿಂಗದ ಹತ್ತರವೇ ತಮ್ಮನ್ನು ಕಟ್ಟಿದ್ದರಿಂದ ದಿನಾಲು ಶಿವಪುರಾಣ, ಶಿವಧ್ಯಾನ ಮೊದಲಾದವುಗಳನ್ನು ಕೇಳುತ್ತಿದ್ದವು. ಆ ವೇಶ್ಯೆಯು ಪ್ರತಿದಿವಸ ಸಾಯಂಕಾಲದಲ್ಲಿ ಶಿವಲಿಂಗದೆದುರಿಗೆ ಇವುಗಳಿಂದ ನರ್ತನಮಾಡಿಸುತ್ತಿದ್ದಳು. ಒಂದಾನೊಂದು ದಿವಸ ಸಾಕ್ಷಾತ್ ಶಂಕರನು ಅವಳ ಸತ್ವಪರೀಕ್ಷಾರ್ಥವಾಗಿ ಓರ್ವ ಸುಂದರ ಪುರುಷನಾಗಿ ಅವಳ ಗೃಹಕ್ಕೆ ಬಂದನು ಮಹಾನಂದೆಯು ಅವನನ್ನು ನೋಡಿದೊಡನೆ ಆಶ್ಚರ್ಯಭರಿತಳಾಗಿ, ಇಂಥ ಪುರುಷನನ್ನು ಇಂದಿಗೂ ಕಾಣಲಿಲ್ಲವಲ್ಲ! ಎಂದು ಚಿಂತಿಸಿ, ಇವನನ್ನು ರತ್ನಖಚಿತ ಮಂಚದಮೇಲೆ ಕುಳ್ಳಿರಿಸಿ, ಯೋಗ್ಯ ಸನ್ಮಾನ ಮಾಡಿದಳು. ನಂತರ ಶಿವನು ಒಂದು ಅಮೌಲ್ಯವಾದ ರತ್ನಕಂಕಣವನ್ನು ಮಹಾನಂದಿಗೆ ಕೊಟ್ಟನು. ಅದರಿಂದ ಸಂತುಷ್ಟಳಾಗಿ, ಇವೊತ್ತಿನಿಂದ ಮೂರುದಿನಗಳ ಪರ್ಯಂತರ ನಿನ್ನಾಧೀನದಲ್ಲಿರುವೆನೆಂದು ವೇಶ್ಯೆಯು ಹೇಳಿದಳು. ಪುರುಷನು ಅವಳ ಮಾತನ್ನು ಅಂಗೀಕರಿಸಿ, ಮಹಾನಂದಿಯ ಕೈಯೊಳಗೆ ಒಂದು ಲಿಂಗವನ್ನು ಕೊಟ್ಟು, ಇದನ್ನು ಬಹಳ ಜತನದಿಂದ ರಕ್ಷಿಸಬೇಕು. ಒಂದುವೇಳೆ ಇದು ಹೋದರೆ, ಅಗ್ನಿಯಿಂದ ದಗ್ಧವಾದರೆ, ನಾನು ಅಗ್ನಿಪ್ರವೇಶಮಾಡೇನು! ಮೂರು ದಿನಗಳವರೆಗೂ ಕಾಪಾಡಬೇಕೆಂದನು. ಅದಕ್ಕೆ ಮಹಾನಂದಿಯು ಸಮ್ಮತಿಸಿ, ಆ ಲಿಂಗವನ್ನು ನರ್ತನಶಾಲೆಯಲ್ಲಿಟ್ಟಳು. ಮರುದಿನ ಮಧ್ಯರಾತ್ರಿಯಲ್ಲಿ ಪರಮೇಶ್ವರನ ಇಚ್ಛಾನುಸಾರವಾಗಿ ಆ ನರ್ತನ-ಶಾಲೆಗೆ ಏಕಾಏಕಿ ಬೆಂಕಿ ಹತ್ತಿತು. ಅವಾಗ್ಯೆ ಪುರುಷನು ನಿದ್ರೆಯಲ್ಲಿದ್ದ ಮಹಾನಂದೆಯನ್ನು ಎಬ್ಬಿಸಿ, ಶಾಲೆಗೆ ಬೆಂಕಿ ಹತ್ತಿರುವದೆಂದು ಸೂಚಿಸಲಾಗಿ ಅವಳು ಗಾಬರಿಯಾಗಿ ಓಡುತ್ತ, ಶಾಲೆಯನ್ನು ಪ್ರವೇಶಿಸಿ, ಪ್ರಥಮದಲ್ಲಿ ಅಲ್ಲಿ ಕಟ್ಟಿದ್ದ ಕೋಳಿಯನ್ನೂ, ಮಂಗವನ್ನೂ ಬಿಚ್ಚಿ ಪುನಃ ಪುರುಷ

ನೆಡೆಗೆ ಬರಲು ಪುರುಷನು, "ನನ್ನ ಲಿಂಗವೆಲ್ಲಿದೆ?" ಎಂದು ಕೇಳಲಾಗಿ, ಅವಳು ದಗ್ಧವಾಯಿತೆಂದು ನುಡಿದಳು. ನಂತರ ಪುರುಷನು ತನ್ನ ಪ್ರತಿಜ್ಞೆಯನ್ನು ಭಂಗ ಮಾಡಿದೆಯೆಂದು ಗದ್ದರಿಸಿ, ಅಗ್ನಿಕುಂಡವನ್ನು ಸಿದ್ಧಮಾಡಿ ಅದರಲ್ಲಿ ಪ್ರವೇಶಿಸಿ ಅದೃಶ್ಯನಾದನು.

ನಂತರ ಮಹಾನಂದೆಯು ವ್ಯಸನಾಕ್ರಾಂತಳಾಗಿ, ಅಹಾ! ನನಗೋಸ್ಕರವೇ ಅವನು ಅಗ್ನಿಪ್ರವೇಶಮಾಡಿದನು. ಇನ್ನು ನಾನು ಜೀವದಿಂದಿರುವದು ಯೋಗ್ಯವಲ್ಲವೆಂದು ತಿಳಿದು ತಾನೂ ಅಗ್ನಿಕುಂಡವನ್ನು ಸಿದ್ಧಮಾಡಿ ನಂತರ ಸ್ನಾನಮಾಡಿ ಶರೀರದಲ್ಲೆಲ್ಲ ಭಸ್ಮವನ್ನು ಹಚ್ಚಿ, ಶಿವನಾಮವನ್ನು ಗರ್ಜನೆಮಾಡುತ್ತ ತನ್ನ ಯಾವತ್ತೂ ಜಿಂದಿಗೆಯನ್ನು ಬ್ರಾಹ್ಮಣರಿಗೆ ದಾನಮಾಡಿ, ಅಗ್ನಿ ಪ್ರವೇಶ ಮಾಡಿದಳು. ಅದೇ ಕ್ಷಣದಲ್ಲಿ ಕುಂಡಲದೊಳಗಿಂದ ಶಂಕರನು ಪ್ರತ್ಯಕ್ಷನಾಗಿ ಅವಳ ಕೈಹಿಡಿದು, "ನಿನ್ನ ಭಕ್ತಿಗೆ ಮೆಚ್ಚಿದೆನು! ವರವನ್ನು ಕೇಳು!!" ಎಂದು ನುಡಿಯಲಾಗಿ, ಅವಳು "ಸಕಲ ನಾಗರಿಕರಿಗೂ ನಿನ್ನ ಲೋಕವನ್ನು ಕೊಡು" ಎನ್ನಲಾಗಿ "ತಥಾಸ್ತು" ಎಂದು ಅದೃಶ್ಯನಾದನು. ನಂತರ ಮಹಾನಂದೆಯು ತನ್ನ ತಾಯಿ, ಅಣ್ಣ, ಸಕಲ ನಾಗರಿಕರೊಂದಿಗೆ ಕೈಲಾಸಕ್ಕೆ ತೆರಳಿದಳು. ಎಲೈ ರಾಜನೇ! ಅರಣ್ಯದಲ್ಲಿ ಹೋಗಿದ್ದ ಕುಕ್ಕುಟ-ಮರ್ಕಟಗಳೇ ಪೂರ್ವ ಪುಣ್ಯಪ್ರಭಾವದಿಂದ ನಿಮ್ಮಲ್ಲಿ ಉತ್ಪನ್ನವಾಗಿರುವವು. ಅದರಿಂದ ಮಹಾ ಶಿವಭಕ್ತ್ರಿಯ ಎಳ್ವರಾಗಿರುವರು, ಎಂದು ಹೇಳಲಾಗಿ ಭದ್ರಸೇನರಾಜನು, ಪ್ರಭೋ! ಈ ಬಾಲಕರ ಆಯುಷ್ಯವೆಷ್ಟಿರುವದು? ಇದರ ಮುಂದಿನ ವೃತ್ತಾಂತವನ್ನು ಹೇಳಬೇಕೆನಲಾ ಮುನಿಪನಿಂತೆಂದನು.

"ರಾಜನೇ ಈ ವಿಷಯದಲ್ಲಿ ಪ್ರಶ್ನೆಯನ್ನು ಮಾಡಬೇಡ. ಯಾಕಂದರೆ ನಾನು ಸುಳ್ಳು ಮಾತಾಡತಕ್ಕವನಲ್ಲ ಒಂದುವೇಳೆ ಆಗುವ ಚರಿತ್ರೆಯನ್ನು ಸತ್ಯವಾಗಿ ಹೇಳಿದರೆ ನಿಮಗೆ ದುಃಖವಾಗದಿರದು." ಎಂದು ನುಡಿಯಲು ರಾಜನು ವಿಶೇಷ ಆಗ್ರಹ ಮಾಡಲಾಗಿ ಪರಾಶರನು, "ಭೂಪನೇ! ನಿನ್ನ ಮಗನಿಗೆ ಇವೊತ್ತಿಗೆ ಹನ್ನೆರಡು ವರ್ಷಗಳಾದವು ಇನ್ನು ಏಳನೇ ದಿವಸದಲ್ಲಿ ನಿನ್ನ ಮಗನು ಕಾಲನ ವಶನಾಗುವನು!" ಎಂದು ಹೇಳಿದೊಡನೆಯೇ ರಾಜನು ಮೂರ್ಛೆಹೊಂದಿ, ನೆಲದಲ್ಲಿ ಉರುಳಿದನು. ಅಂತಃಪುರದ ಸ್ತ್ರೀಯರು ಹಾಹಾಕಾರ ಮಾಡತೊಡಗಿದರು. ಸಭಾಸದರು ಖಿನ್ನಮನಸ್ಕರಾಗಿ ಕಣ್ಣೀರು ಉದುರಿಸಿದರು. ಈ ರೀತಿ ಸರ್ವರೂ ದುಃಖಾಕ್ರಾಂತರಾದದ್ದನ್ನು ಕಂಡು, ಪರಾಶರನು ರಾಜನೆಡೆಗೆ ಬಂದು, ಅವನನ್ನು ಸಂತೈಸಿ, ಸದುಪದೇಶವನ್ನು ಮಾಡತೊಡಗಿದನು "ಭದ್ರಸೇನರಾಜನೇ! ಚಿಂತೆಯನ್ನು ಮಾಡಬೇಡ. ಮನುಷ್ಯರಿಗೆ ಸುಖ-ದುಃಖಗಳು ಇದ್ದೇ ಇರುವವು. ಇರಲಿ! ಆದಿಯಲ್ಲಿ-ಯಾವುದು ಇಲ್ಲದ ಕಾಲದಲ್ಲಿ-ಪರಬ್ರಹ್ಮಣನಿಂದ 'ಅಹಂ ಬ್ರಹ್ಮ' ಎಂಬ ಶಬ್ದ ಹೊರಟಿತು, ಅದೆ ಮಾಯೆಯು;ಇದ

ರಿಂದ ಮಹಾತತ್ವವು ಉತ್ಪನ್ನವಾಯಿತು. ಮುಂದೆ ಮೂರು ವಿಧ ಅಹಂಕಾರಗಳು-ಹುಟ್ಟಿದವು. ಮತ್ತು ಸತ್ವದಿಂದ ವಿಷ್ಣುವೂ, ರಜದಿಂದ ಬ್ರಹ್ಮನೂ, ತಮದಿಂದ ರುದ್ರನೂ ಜನಿಸಿದರು. ಬ್ರಹ್ಮನಿಗೆ ಸೃಷ್ಟಿಮಾಡಲಿಕ್ಕೆ ಜ್ಞಾನವಿಲ್ಲದ ಕಾರಣ ಮಹಾದೇವನು ನಾಲ್ಕು ವೇದಗಳನ್ನುಪದೇಶಿಸಿದನು. ಇದರಲ್ಲಿ ಮುಖ್ಯವಾದದ್ದೆಂದರೆ-ರುದ್ರಾಧ್ಯಾಯವು. ಇವನ್ನು ಶಿವನು ಸಪ್ತರ್ಷಿಗಳಿಗೂಹೇಳಿದನು. ಋಷಿಗಳು ಈ ರುದ್ರಾಧ್ಯಾಯವನ್ನು ಭೂಲೋಕದಲ್ಲಿ ಹರವಿದರು ಅದರಿಂದಸಕಲ ಮನುಜರು ಪಾಪಕೃತ್ಯಮಾಡದೆ ಪೂರ್ಣ ಋಷಿಯಾಗಲು ಯಮಲೋಕವು ಹಾಳುಬಿದ್ದು, ಕಾಲನು ಶಿವನಿಗೆ ಶರಣಾಗತನಾಗಲು, ಶಿವಾಜ್ಞೆಯಿಂದ ಬ್ರಹ್ಮನು ಅಧರ್ಮವನ್ನು ಸೃಜಿಸಿದನು. ಅದರಿಂದ ಮನುಜರು ಪಾಪಾಚರಣೆ ಮಾಡಿ ಕಾಲನೂರಿಗೆ ತೆರಳಲಾರಂಭಿಸಿದರು. ಆದ್ದರಿಂದ ರಾಜನೇ ರುದ್ರಾಧ್ಯಾಯವು ಮಹತ್ವವಾದದ್ದು ಕಾರಣ, ನೀನು ಹತ್ತುಸಹಸ್ರಾವರ್ತನ ರುದ್ರಾಭಿಷೇಕ ಮಾಡಿಸು! ಅದರಿಂದ ನಿನ್ನ ಮಗನು ಮೃತ್ಯುವು ದೂರಾಗುವದು!! ಇಲ್ಲವೆ, ಪ್ರತಿದಿವಸ ನೂರು ನೀರುತುಂಬಿದ ಕೊಡಗಳನ್ನಿಟ್ಟು, ಅವುಗಳಲ್ಲಿ ಪಂಚಪಲ್ಲವಗಳನ್ನು ಹಾಕಿ ಸಾವಿರ ಆವರ್ತಿ ರುದ್ರಾಭಿಷೇಕ ಮಾಡಿ, ಆ ಜಲವನ್ನು ನಿನ್ನ ಮಗನ ಮೈಮೇಲೆ ಸಿಂಪಡಿಸಬೇಕು! ಇದರಂತೆ ಏಳುದಿನ ಮಾಡಲು, ಪುತ್ರನ ಮೃತ್ಯುವು ದೂರಾಗುವದು!! ಎಂದು ಹೇಳಲಾಗಿ ರಾಜನು, " ಮುನಿಯೇ ಈ ಮಹಾಕಾರ್ಯದಲ್ಲಿ ತಾವೇ ಆಚಾರ್ಯತ್ವವನ್ನು ವಹಿಸಿ, ಕಾರ್ಯಸಾಂಗ ಮಾಡಬೇಕು, " ಎಂದು ಬೆಸಗೊಳ್ಳಲಾಗಿ ಪರಾಶರನು ಸಮ್ಮತಿಸಿದನು.

ನಂತರ ರಾಜನು ಸದಾಚಾರಸಂಪನ್ನರಾದ ಬ್ರಾಹ್ಮಣರನ್ನು ಕರೆಯಿಸಿ ಪರಾಶರನಿಗೆ ಒಪ್ಪಿಸಲು, ಆ ಋಷಿಯು ಜಲಪೂರಿತ-ಸಹಸ್ರಘಟಗಳನ್ನಿಟ್ಟು ಅವುಗಳಲ್ಲಿ ಪಂಚಪಲ್ಲವಗಳನ್ನು ಹಾಕಿ, ರುದ್ರಾಭಿಷೇಕ ಪ್ರಾರಂಭಮಾಡಿದನು. ಏಳನೇ ದಿನ ಬಾಲಕನಿಗೆ ಝಾವ ಎರಡು ಆಯುಷ್ಯವಿರುತ್ತಿರಲಿಕ್ಕೆ ಹಸುಳನು ಭೂಮಿಯ ಮೇಲೆ ಬಿದ್ದು ಅಸುವನ್ನು ಬಿಟ್ಟನು. ಅದನ್ನು ಕಂಡು ರಾಜನು ದುಃಖಾಭಿಪ್ಲುತನಾಗಲು, ಪರಾಶರನು ಅವನನ್ನು ಸಂತೈಸಿ, ಬಾಲಕನ ಮೇಲೆ ಮಂತ್ರಪೂರಿತ ಕೊಡದಲ್ಲಿದ್ದ ನೀರನ್ನು ಸಿಂಪಡಿಸಲು ಬಾಲಕನು ಸಚೇತನನಾಗಿ ಎದ್ದುಕೂತನು. ರಾಜನು ಪರಮಾನಂದಭರಿತನಾಗಿ ಪರಾಶರಮುನಿಯನ್ನು ಎಡವಿಡದೆ ಕೊಂಡಾಡಿ, ಬಾಲಕನನ್ನು ವಿಚಾರಿಸಲು ಕಂದನು, "ತಂದೆಯೇ! ನನ್ನನ್ನು ಭಯಂಕರ ರೂಪಿಗಳಾದ, ಕಪ್ಪು ದೇಹಿಗಳಾದ ನಾಲ್ವರು ಯಮದೂತರು ಎಳೆದುಕೊಂಡು ಹೋಗುತ್ತಿದ್ದರು. ಆ ಕಾಲದಲ್ಲಿ ಯಾರೋ ನಾಲ್ಕುಜನ ಭಸ್ಮೋದ್ಧೂಳಿತ ವಿಗ್ರಹರು ಬಂದು, ನನ್ನನ್ನು ಅವರ ಕೈಯಿಂದ ಬಿಡಿಸಿದರು. ಕೂಡಲೆ ನಾನು ಎದ್ದು ಕುಳಿತೆನು," ಎಂದು ಬೆಸಗೊಳ್ಳಲಾಗಿ ನೃಪನು ಬ್ರಾಹ್ಮಣರಿಗೆ ಇಚ್ಛಾಭೋಜನ ಮಾಡಿಸಿ, ವಿಶೇಷ ದಕ್ಷಿಣ-ತಾಂಬೂಲಗಳನ್ನು ಕೊಡುವ ಸಮಯದಲ್ಲಿ ದೇವರ್ಷಿಯಾದ ನಾರದನು ಕೈಯಲ್ಲಿ ರುದ್ರಾ

ವೀಣೆಯನ್ನು ಧರಿಸಿ, ಭಗವನ್ನಾಮ ಗರ್ಜಿಸುತ್ತಾ, ಆ ಸಭಾಸ್ಥಾನಕ್ಕೆ ಬರಲು ಎಲ್ಲರೂ ಭಕ್ತಿಯಿಂದ ಯೋಗ್ಯ ಸನ್ಮಾನ ಮಾಡಿದರು. ನಂತರ ರಾಜನು ಭೂಮಿಯಲ್ಲಿ ನಡೆದ ಚಮತ್ಕಾರವನ್ನು ಅರುಹಬೇಕೆಂದು ಬಿನ್ನೈಸಲಾಗಿ ನಾರದನು, "ರಾಜನೇ! ನಾನು ಬರುವ ಕಾಲದಲ್ಲಿ ಶಿವದೂತರು ಮೃತ್ಯುವನ್ನು ಹಿಡಿದುಕೊಂಡು ಹೋಗುತ್ತಿದ್ದರು. ಮತ್ತು ಅವರೊಳಗಿದ್ದ ವೀರಭದ್ರನ ಎದುರಿಗೆ ಎಲೋ ! ಭದ್ರಸೇನರಾಜನ ಮಗನನ್ನು ಹ್ಯಾಗೆ ಒಯ್ಯುತ್ತಿದ್ದಿ ? ಅವನಿಗೆ ಹತ್ತು ಸಹಸ್ರವರ್ಷ ಆಯುಷ್ಯವೆಂಬುವದು ನಿಮಗೆ ಗೊತ್ತಿಲ್ಲವೇ ? ಶಿವಾಪರಾಧವನ್ನು ಯಾಕೆ ಮಾಡಿದಿ ? ರುದ್ರಾಧ್ಯಾಯದ ಮಹಿಮೆಯು ನಿಮಗೆ ನೆನಸಿಲ್ಲವೆ ? ಎಂದು ಕೇಳಲಾಗಿ, ಯಮನು ಆ ಹುಡುಗನಿಗೆ ಹನ್ನೆರಡು ವರ್ಷ ಆಯುಷ್ಯವಿದೆ ನೋಡೆಂದು ಚಿತ್ರಗುಪ್ತರನ್ನು ಕರೆಯಿಸಿ ಲೆಖ್ಖವನ್ನು ತೋರಿಸಿದನು. ಆದರೆ ಪರಮೇಶ್ವರನ ಲೀಲೆಯಿಂದ ವಹಿಯಲ್ಲಿ ಹತ್ತು ಸಹಸ್ರ ವರ್ಷ ಎಂದು ಬರೆದಿತ್ತು. ಆದರಿಂದ ಯಮನು ಖಿನ್ನನಾಗಿ ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡು ತನ್ನ ಪುರಕ್ಕೆ ತೆರಳಿದನು. ರಾಜನೇ ! ನೀನು ರುದ್ರಾಧ್ಯಾಯವನ್ನು ಜಪಮಾಡಿಸಿದ್ದು ಬಹಳೇ ಉತ್ತಮವು, " ಎಂದು ನಾರದನು ಕೊಂಡಾಡಲು, ರಾಜನು ಸಂತುಷ್ಟನಾಗಿ ಮುನಿಯನ್ನು ಪೂಜಿಸಿ, ಪುನಃ ಶಂಕರನ ಪ್ರೀತ್ಯರ್ಥವಾಗಿ ರುದ್ರಾಧ್ಯಾಯ ಪಾರಾಯಣ ಮಾಡಿಸಿದನು. ಎಲ್ಲರೂಸಂತುಷ್ಟರಾಗಿ ತಮ್ಮತಮ್ಮಸ್ಥಳಕ್ಕೆ ತೆರಳಿದರು. ರಾಜನು ತನ್ನಮಗನಿಗೆ ಪಟ್ಟಾಭಿಷೇಕಮಾಡಿ, ಪ್ರಧಾನಪುತ್ರನಿಗೆ ಮಂತ್ರಿಪಟ್ಟವನ್ನು ಕಟ್ಟಿ, ತನ್ನ ಹೆಂಡತಿಯಿಂದ ಯುಕ್ತನಾಗಿ ಅರಣ್ಯವನ್ನು ಸೇರಿ ಶಿವಾರಾಧನೆಮಾಡಿ ಕೈಲಾಸಕ್ಕೆ ತೆರಳಿದನು. ಇತ್ತ ಬಾಲಕನಾದರೂ ಹತ್ತುಸಹಸ್ರ ವರ್ಷ ಧರ್ಮದಿಂದ ರಾಜ್ಯವನ್ನು ಪಾಲಿಸಿ, ನಂತರ ಶಿವಪುರಿಗೆ ಪ್ರಯಾಣ ಮಾಡಿದನು.

೧೧-ನೇ ಅಧ್ಯಾಯ ಸಂಪೂರ್ಣವಾದುದು.



## ಹನ್ನೆರಡನೆಯ ಅಧ್ಯಾಯ ಪ್ರಾರಂಭವು.

# ಬಹುಮತಿಯ ಚರಿತ್ರೆ.



ಶಿವಕೀರ್ತನೆಯನ್ನೂ, ಪುರಾಣವನ್ನೂ ಪ್ರತಿಯೊಬ್ಬನು ಕೇಳಲಿಕ್ಕೆ ಬೇಕು. ಯಾವ ಮನುಷ್ಯನು ಈ ಕೃತ್ಯಕ್ಕೆ ನಿಂದೆ ಮಾಡುವನೋ, ಅವನು ನರಕಕ್ಕೆಪಾತ

ನಾಗುವನು. ಯಾವಾತನು ಪುರಾಣ ಕೇಳುವ ಕಾಲದಲ್ಲಿ ಮಲಗಿಕೊಳ್ಳುವನೋ ಅವನು ಹಾವಾಗಿ ಹುಟ್ಟುವನು. ಯಾವಾತನು ಮಧ್ಯ ಪುರಾಣದಲ್ಲಿಯೇ ಎದ್ದು ಹೋಗುವನೋ ಅವನು ಅನೇಕ ಸಂಕಟಗಳಲ್ಲಿ ಬೀಳುವನು. ಯಾವನು ಪುರಾಣವ ಕೇಳುವ ಕಾಲದಲ್ಲಿ ತಾಂಬೂಲ ಸೇವಿಸುವನೋ ಅವನು ಯಮದೂತನಿಗೊಳಗಾಗುವನು. ಯಾವನು ಪುರಾಣಿಕನಿಗೆ ನಮಸ್ಕಾರಮಾಡದೆ ಕೂಡುವನೋ ಅವನು ಬಿದಿರುಗಿಡವಾಗಿ ಹುಟ್ಟುವನು. ಶಿವಕಥೆಯನ್ನು ನಿಂದೆಮಾಡುವವನು ನಾಯಿಯಾಗುವನು. ಪುರಾಣಿಕನನ್ನು ಪೂಜಿಸಿ ಭೋಜನ-ದಕ್ಷಿಣಾದಿಗಳಿಂದ ಸಂತೋಷಪಡಿಸಿದವನಿಗೆ ಐಶ್ವರ್ಯ-ವೃದ್ಧಿಯಾಗುವದಲ್ಲದೆ ಶಿವನಿಗೆ ಪ್ರೀತಿಯುವನಾಗುವನು. ಇರಲಿ.

ಪೂರ್ವದಲ್ಲಿ ದಕ್ಷಿಣ ದೇಶದೊಳಗೆ ಬಾಷ್ಕಳವೆಂಬ ಪುರದಲ್ಲಿ ವಿದುರನೆಂಬ ಬ್ರಾಹ್ಮಣನಿರುತ್ತಿದ್ದನು. ಆ ಊರಿನ ಜನರೆಲ್ಲರೂ ಪಾಪ ಕರ್ಮದಲ್ಲಿ ಆಸಕ್ತರಿದ್ದರು. ಈ ಬ್ರಾಹ್ಮಣನಿಗೆ ಮಹಾಸುಂದರಿಯಾದ ಬಹುಲೆಯೆಂಬ ಮಗಳಿದ್ದಳು. ಇವಳ ಪತಿಯು ಪರಸ್ತ್ರೀಯರಲ್ಲಿ ಆಸಕ್ತನಾಗಿದ್ದನು ಅವಳು ಯೌವನಕ್ಕೆ ಬಂದ ಕಾರಣ ತನ್ನ ರೂಪದಿಂದಲೂ, ಹಾವಭಾವದಿಂದಲೂ ಪುರಷರ ಮನವನ್ನು ಜಗ್ಗಿ ಜಾರಕರ್ಮದಲ್ಲಿ ಆಸಕ್ತಳಾದಳು. ಒಂದು ದಿನ ಬೆಳದಿಂಗಳಲ್ಲಿ ಒಬ್ಬ ವಿಟನೊಂದಿಗೆ ಅವಳು ಸರಸ ಕ್ರೀಡೆಯನ್ನು ಮಾಡುವ ಕಾಲದಲ್ಲಿ ಅವಳ ಪತಿಯು ಅಕಸ್ಮಾತ್ ನೋಡಿದನು; ಆ ವಿಟನು ಇವನಿಗಂಜಿ ಓಡಿಹೋದ. ಪತಿಯು ಇವಳನ್ನು ಹಿಡಿದು ಹೊಡೆಯಲಾರಂಭಿಸಲು, ಬಹುಲೆಯು ನನ್ನನ್ನು ಯಾಕೆ ಹೊಡೆಯುವಿ ? ನೀನು ಪರಸ್ತ್ರೀಯಲ್ಲಿ ಆಸಕ್ತನಾಗಿರುವಿ. ನಾನು ಪರಪುರುಷರಲ್ಲಿ ಆಸಕ್ತಳಾಗಿರುವೆನು. ಇದರೊಳಗೆ ತಪ್ಪೇನು ? ಎಂದು ಕೇಳಲಾಗಿ ಪತಿಯು ನನಗೆ ದ್ರವ್ಯ ಬೇಕಾಗಿರುವದು ನೀನು ಜಾರತ್ವದಿಂದ ಅಸಂಖ್ಯ ಹಣವನ್ನು ಸಂಪಾದಿಸಿರುವಿ, ಕೊಡು ಯೆನಲು, ಅವಳು ಕೊಡುವದಿಲ್ಲವೆಂದ ಕಾರಣ ಜುಲುಮೆಯಿಂದ ಅವಳ ಮೈಮೇಲಿನ ಸಾಮಾನುಗಳನ್ನು ತೆಗೆದುಕೊಂಡು ಜಾರಿಣಿಯರ ಮನೆಗೆ ತೆರಳಿದನು. ಈ ಪ್ರಕಾರವಾಗಿ ಈ ದಂಪತಿಗಳು ವ್ಯಭಿಚಾರಕೃತ್ಯದಲ್ಲಿ ಆಸಕ್ತರಾಗಿರಲು, ಕೆಲವು ಕಾಲದ ಮೇಲೆ ಬಹುಲೆಯ ಪತಿಯು ಮರಣಪಟ್ಟನು. ಯಮದೂತರು ಇವನನ್ನು ಹಿಡಿದುಕೊಂಡು ಅನೇಕ ಸಂಕಟಗಳನ್ನು ಪಡಿಸಿದರು. ನಂತರ ವಿಂಧ್ಯಾದ್ರಿ ಪರ್ವತದಲ್ಲಿ ಪಿಶಾಚಿಯಾಗಿ ಜನಿಸಿ ಜನರಿಗೆ ಅನೇಕ ಬಾಧೆಗಳನ್ನು ಪಡಿಸಹತ್ತಿದನು. ಇತ್ತ ಬಹುಲೆಗೆ ಓರ್ವ ಪುತ್ರನು ಹುಟ್ಟಿದನು. ಈ ಹುಡುಗನ ತಂದೆಯು ಇಂಥವನೇ ಎಂಬುದು ಯಾರಿಗೂ ತಿಳಿಯಲಿಲ್ಲ. ಒಂದಾನೊಂದು ದಿವಸ ಗೋಕರ್ಣಕ್ಕೆ ಹೋಗುವ ಯಾತ್ರಿಕರ ಸಂಗಡ ಬಹುಲೆಯು ತನ್ನ ಪುತ್ರನೊಂದಿಗೆ ಪೊರಮಟ್ಟಳು. ಗೋಕರ್ಣಕ್ಕೆ ಬಂದನಂತರ ಬಹುಲೆಯು ಒಂದು ದೇವಾಲಯದಲ್ಲಿ ಪುರಾಣನಡೆದಿರುವದನ್ನು ಕಂಡು ಆ ಜನಸಂಘದಲ್ಲಿ ಬಂದು ಕುಳಿತಳು ಆ ಪುರಾಣದಲ್ಲಿ ಜಾರ

ತ್ರವಮಾಡುವ ಸ್ತ್ರೀಯರು ಮರಣಪಟ್ಟನಂತರದಲ್ಲಿ ಯಮದೂತರು ಅವರ ಶರೀ ದಲ್ಲಿ ಕಾದ ಕಬ್ಬಿಣವನ್ನು ಚುಚ್ಚಿ, ಬಹಳೇ ವ್ಯಥೆ ಪಡಿಸುವರೆಂದು ಪುರಾಣಿಕನು ಹೇಳಲಾಗಿ, ಬಹುಲೆಯು ಕೇಳಿ ಭೀತಳಾಗಿ, "ಅಹಾ! ನಾನು ಜಾರಕೃತ್ಯವನ್ನು ಬಹಳೇಮಾಡಿದನು. ನನಗೆ ಎಷ್ಟು ದುಃಖಗಳು ಬರಬಹುದು. ನನ್ನ ಕಷ್ಟವು ಹೇಗೆ ಅಳಿದೀತು. !! ಯಾರಿಗೆ ಶರಣಾಗತಳಾಗಲಿ !! ಯಾರು ನನ್ನ ದುಃಖವನ್ನು ಅಡಗಿಸುವರು !! ಹೇಗೆ ಉದ್ಧಾರಾದೇನು !! ಎಂದು ಕಷ್ಟದಿಂದ ವಿಚಾರಮಾಡಿ ಪುರಾಣ ಮುಗಿದ ಬಳಿಕ ಪುರಾಣಿಕನ ಹತ್ತರ ಹೋಗಿ, ಅವನ ಚರಣಗಳನ್ನು ಹಿಡಿದುಕೊಂಡು ತಾನು ಮಾಡಿದ ಯಾವತ್ತೂ ಕೃತ್ಯವನ್ನು ಹೇಳಿ ತನ್ನನ್ನು ಉದ್ಧಾರಮಾಡಬೇಕೆಂದು ಅನೇಕ ವಿಧದಿಂದ ಬೇಡಿಕೊಳ್ಳಲಾಗಿ ಪುರಾಣಿಕನು, "ಎಲಾ! ಸುದತಿಯೇ! ಚಿಂತೆಯನ್ನು ಮಾಡಬೇಡ ಸಕಲ ಪಾಪಗಳನ್ನು ನಾಶ ಮಾಡುವ ಮಂತ್ರವನ್ನು ಹೇಳುವೆನು," ಎಂದು ಶಿವಪಂಚಾಕ್ಷರೀ ಮಹಾ ಮಂತ್ರವನ್ನು ಉಪದೇಶಿಸಿ ಶಿವಾರ್ಚನೆಮಾಡುವ ಕ್ರಮುವನ್ನು ತಿಳಿಹಿದನು.

ಅಂದಿನಿಂದ ಅವಳು ಬಂಧು ಮೊದಲಾದವರನ್ನು ಮರೆತು ಭಸ್ಮವನ್ನು ಹಚ್ಚಿ ಕೊಂಡು ರುದ್ರಾಕ್ಷಮಾಲೆಯನ್ನುಧರಿಸಿ ತೀರ್ಥದಲ್ಲಿ ಸ್ನಾನ ಮಾಡುತ್ತಾ, ಯಾವಾ ಗಲೂ ಮಂತ್ರವನ್ನು ಉಚ್ಚರಿಸಲಾರಂಭಿಸಲು ಅಗ್ನಿಯಲ್ಲಿ ಬಿದ್ದ ಕಾಷ್ಠದಂತೆ ಸಕಲ ಪಾಪಗಳು ನಾಶವಾಗಿ ಅಂತ್ಯದಲ್ಲಿ ಶಿವಲೋಕವನ್ನೈದಿದಳು. ಅಲ್ಲಿ ಬಹುಲೆಯು ಶಂಕರನನ್ನೂ ಅಂಬಿಕೆಯನ್ನೂ ಭಕ್ತಿಯಿಂದ ಪೂಜಿಸಿ ಅನೇಕ ವಿಧದಿಂದ ಸ್ತೋತ್ರ ಮಾಡಲಾಗಿ ಪಾರ್ವತಿಯು ಮೆಚ್ಚಿ ವರವನ್ನು ಕೇಳೆಂದು ನುಡಿಯಲಾಗಿ ಬಹು ಲೆಯು ಕೈಜೋಡಿಸಿ, ಭಕ್ತಿಯಿಂದ ದೇವಿ! ನನಗೆ ಏನೂ ಬೇಡ. ನನ್ನಪತಿಯು ಬಹಳ ಪಾಪಕೃತ್ಯಮಾಡಿ ಯಾವ ಸ್ಥಳದಲ್ಲಿ ಏನಾಗಿ ಜನಿಸಿರುವನೋ ನನಗೆ ತಿಳಿ ಯದು. ಕಾರಣ ನನ್ನ ಪತಿ ಸಹಿತ ನಿನ್ನ ಸನ್ನಿಧಿಯಲ್ಲಿ ಬರಬೇಕೆನ್ನುವೆನೆಂದು ಬೇಡಿಕೊಳ್ಳಲಾಗಿ ಅಂಬಿಕೆಯು ತುಂಬುರನನ್ನು ಕರೆದು, ವಿಂಧ್ಯಪರ್ವತದಡಿಯಲ್ಲಿ ಪಿಶಾಚಿಯ ಜನ್ಮ ಪಡೆದ ಇವಳಪತಿಗೆ ಶಿವ-ಮಹಾತ್ಮೆಯನ್ನು ಹೇಳು ಆದರಿಂದ ಅವನು ನಿಷ್ಪಾಪನಾಗಿ ಇಲ್ಲಿಗೆ ಬರುವನೆಂದು ಆಜ್ಞಾಪಿಸಲು, ತುಂಬರನು ಅದೇ ಪ್ರಕಾರವಾಗಿ ವಿಂಧ್ಯಾಚಲಕ್ಕೆ ಬಂದು ಇವಳ ಪತಿಗೆ ಶಿವಮಂತ್ರವನ್ನು ಉಪದೇಶಿ ಸಿದೊಡನೆಯೇ ಪಿಶಾಚ ಜನ್ಮ ತೊಲಗಿ ದಿವ್ಯದೇಹವನ್ನು ಧರಿಸಿ, ವಿಮಾನರೂಢ ನಾಗಿ ಕೈಲಾಸಕ್ಕೆ ಬಂದು ಬಹುಲೆಯನ್ನು ಹೊಂದಿ ಅವಳ ಉಪಕಾರಕ್ಕೆ ತಲೆದೂಗಿ ಶಿವಚರಣಗಳಿಗೆ ನಮಸ್ಕರಿಸಿ, ಈರ್ವರೂ ಶಿವಸಾಯುಜ್ಯವನ್ನು ಪಡೆದರು.



# —•— ಭಸ್ಮಾಸುರನ ಕಥೆ. —•—

ಒಂದಾನೊಂದು ದಿವಸ ಪ್ರದೋಷಕಾಲದಲ್ಲಿ ಶ್ರೀ ಶಂಕರನು ಭಸ್ಮ ಹಚ್ಚಿಕೊಳ್ಳುವ ನಿಮಿತ್ಯವಾಗಿ ಕೈಯಲ್ಲಿ ವಿಭೂತಿಯನ್ನು ಧರಿಸಿದಾಗ ಅದರಲ್ಲಿ ಒಂದು ಹರಳು ಬಂತು. ಅದನು ತೆಗೆದು ಭೂಮಿಯಮೇಲೆ ಒಗೆದಕೂಡಲೇ ಅದರಿಂದ ಓರ್ವ ರಕ್ಕಸನು ಜನಿಸಿದನು. ಇವನನ್ನು ಕಂಡು ಸಾಂಬನು ಭಸ್ಮಾಸುರನೆಂದು ಹೆಸರಿಟ್ಟನು. ಭಸ್ಮಾಸುರನು ಶಂಕರ-ಭಕ್ತನಾಗಿ ಪ್ರತಿ ದಿನ ಪರಮೇಶ್ವರನಿಗೆ ನೂತನ ಚಿತಾಭಸ್ಮವನ್ನು ತಂದು ಕೊಡುತ್ತ ಶಿವನ ಚಿತ್ತವನ್ನು ಒಲಿಸಿದನು. ಒಂದು ದಿನ ಭಸ್ಮಾಸುರನು ಮನದೊಳಗೆ ಆಹಾ ! ದೇವತೆಗಳು ಇಷ್ಟೇಕೆ ಪೂಜ್ಯರಾಗಿರುವರು !! ರಕ್ಕಸರನ್ನು ಕಂಡು ಇವರು ನಿಂದೆ ಮಾಡುವರಲ್ಲ ! ನಾನು ಹುಟ್ಟಿದ್ದಕ್ಕೆ ಸಾರ್ಥಕವೇನು ? ನನ್ನ ತಪೋಬಲದಿಂದ ಶಂಕರನನ್ನು ಒಲಿಸಿ ಅವನಿಂದ ವರವಂ ಪಡೆದು ಸಕಲ ದೇವತೆಗಳನ್ನು ನಿರ್ನಾಮಮಾಡಿದರೆ ನಾನೇ ಅರಸನಾಗುವೆನು. ಅಲ್ಲದೆ ನನ್ನ ಕುಲವನ್ನು ಉದ್ಧಾರಮಾಡಿದಂತಾಗುವದು, ಎಂದು ಆಲೋಚಿಸಿ ಆಹೊತ್ತು ಶಂಕರನೆಡೆಗೆ ಬಂದು ಕಾಪಟ್ಯದಿಂದ, ದೇವನೆ ! ಭೂಮಿಯಲ್ಲಿ ಎಷ್ಟು ತಿರುಗಿದರೂ ಚಿತಾಭಸ್ಮವು ಸಿಗಲಿಲ್ಲ. ಏನು ಮಾಡಬೇಕು? ಸುಮ್ಮನೆ ನನ್ನನ್ನು ದಿನಾಲು ಯಾಕೆ ತಿರುಗಿಸುತ್ತೀ ? ನಾನು ಯಾರ ತಲೆಯಮೇಲೆ ಹಸ್ತವನ್ನಿಡುವೆನೋ ಅವರು ತತ್‌ಕ್ಷಣದಲ್ಲಿಯೇ ನಾಶವಾಗಬೇಕು. ಇಂಥ ವರವನ್ನು ಕೊಡಬಾರದೇ ? ಅಂದರೆ, ನಿನಗೆ ಬೇಡಿದಾಗ್ಯೆ ಚಿತಾಭಸ್ಮವು ದೊರೆಯುವದು, ಎಂದು ಪೇಳಲಾಗಿ ಪರಮೇಶ್ವರನು ದುರುಳನ ಕಪಟವನ್ನರಿಯದೆ ವರವನ್ನೀಯಲಿಕ್ಕೆ ಸಿದ್ಧನಾಗಲು, ಪಾರ್ವತಿಯು ಬಂದು ರಕ್ಕಸನಿಗೆ ಈ ವರವನ್ನು ಕೊಡಬಾರದು, ಒಂದು ವೇಳೆ ಕೊಟ್ಟರೆ, ಇವನಿಂದ ಮಹದನರ್ಥವಾಗುವದು, ಎಂದು ಬಹಳಪರಿಯಿಂದ ಹೇಳಿದಳು. ಇದರಂತೆ ಗಜಾನನ, ಷಡಾನನ, ನಂದಿ, ಭೃಂಗಾದಿಗಳು ಸಹ ನುಡಿದರು. ಭೋಲಾನಾಥನು ಇವರ ಮಾತನ್ನು ಲಕ್ಷೀಕರಿಸದೆ, ಭಸ್ಮಾಸುರನು ನನ್ನ ಮಗನಂತಿರುವನು, ಅಲ್ಲದೆ ಮಹಾಭಕ್ತನು, ಇವನಿಂದ ಕೆಟ್ಟಕಾರ್ಯವೆಂದಿಗೂ ಸಂಭವಿಸದೆಂದು ಹೇಳಿ, ರಕ್ಕಸನಿಗೆ ಅವನ ಇಚ್ಛೆಯಂತೆ ವರವನ್ನು ಕೊಟ್ಟನು.

ಭಸ್ಮಾಸುರನು ಸಂತುಷ್ಟನಾಗಿ ತನ್ನ ಬಯಕೆಯು ಕೈಗೂಡಿತೆಂದು ತಿಳಿದು, ಭೂಮಿಯಲ್ಲಿ ಬಂದು ಧಾರ್ಮಿಕರಾದ ರಾಜರನ್ನೂ ಮುನಿಗಳನ್ನೂ ಸಂಹರಿಸಹತ್ತಿದನು. ಸಕಲ ಭೂಮಿಯಲ್ಲಿಯೂ ಹಾಹಾಕಾರ ನಡೆಯಿತು. ಈ ವರ್ತಮಾನವು ಶಂಕರನಿಗೆ ಸ್ವಲ್ಪಾದರೂ ತಿಳಿದಿದ್ದಿಲ್ಲ. ಋಷಿಗಳೂ, ದೇವತೆಗಳೂ ಇವನ ಪೀಡೆಯನ್ನು ತಡೆಯಲಾರದೆ ಬ್ರಹ್ಮನಿಗೆ ಶರಣಾಗತರಾಗಲು, ಬ್ರಹ್ಮನು ಇವರೆಲ್ಲರನ್ನು ಕರೆದುಕೊಂಡು ವೈಕುಂಠಪತಿಯ ಹತ್ತಿರ ಬಂದನು. ನಾರಾಯಣನು ಎಲ್ಲ

ರೊಂದಿಗೆ ಕೈಲಾಸಕ್ಕೆಬಂದು ದೈತ್ಯನ ಕೃತ್ಯವನ್ನು ಹೇಳಿ, ಮುಂದೇನು ಗತಿಯೆಂದು ಕೇಳುವಷ್ಟರಲ್ಲಿಯೇ ಭಸ್ಮಾಸುರನು ಅಲ್ಲಿಗೆ ಬಂದು, ಎಲೋ ಮೂರ್ಖರೇ! ಇಲ್ಲಿಗೆ ಯಾಕೆ ಬಂದಿರುವಿರಿ ? ನಿಮ್ಮನ್ನು ಈಗಲೇ ಸಂಹರಿಸುವೆನೆಂದು ಗದ್ದರಿಸಿ, ಪಾರ್ವತಿಯನ್ನು ನೋಡಿ, ಅಹಾ ! ಇಂಥ ಸುಂದರ ಸ್ತ್ರೀಯು ನನಗೆ ಎಲ್ಲಿ ದೊರಕುವಳು! ಆದ್ದರಿಂದ ಶಂಕರನನ್ನು ಸಂಹರಿಸಿ, ಇವಳನ್ನು ತೆಗೆದುಕೊಂಡು ಹೋಗಬೇಕೆಂದು ಆಲೋಚಿಸಿ ಶಂಕರನ ತಲೆಯಮೇಲೆ ತನ್ನ ಹಸ್ತವನ್ನಿಡಲಿಕ್ಕೆ ಯತ್ನಮಾಡಿದನು. ಅದನ್ನು ಕಂಡು ಎಲ್ಲ ದೇವತೆಗಳು ಪಲಾಯನ ಸೂಕ್ತವನ್ನು ಹೇಳಿದರು; ಶಂಕರನು ಅರಣ್ಯದಲ್ಲಿ ಓಡಲಾರಂಭಿಸಿದನು. ಇವನನ್ನು ಬೆಂಬಟ್ಟಿ ಭಸ್ಮಾಸುರನಾದರೂ ನಡೆದನು, ಅನ್ನ-ನೀರು ಬಿಟ್ಟು, ವಾಯುವನ್ನೇ ಆಹಾರಮಾಡಿಕೊಂಡು, ಹತ್ತು ಸಹಸ್ರವರ್ಷ ಪರ್ಯಂತರವಾಗಿ ತಪಸ್ಸುಮಾಡಿದರೂ ಮನಸ್ಸಿನಿಂದ ಕೂಡಸಿಗದೆ ಇದ್ದ ಪರಮಾತ್ಮನು ಈ ದುರಳನ ಕೈಗೆ ಸಿಕ್ಕುವನೆ ? ಈ ದುರುಳನಾದ ದಾನವನು, ಅಹಾ ! ಶಂಕರನು ಸಿಕ್ಕನೆಂದೂ, ಅಯ್ಯೋ ! ದೂರಹೋದನೆಂದೂ ಬೊಗಳುತ್ತಾ ಬಹಳ ದೂರ ಬೆನ್ನಟ್ಟಿ ಹೋದನು. ಎಷ್ಟು ಶ್ರಮಪಟ್ಟರೂ ನಿರರ್ಥಕವಾಗಿ ದೈತ್ಯನು ಕಂಗೆಟ್ಟು ಸುಮ್ಮನೆ ಕುಳಿತನು. ಈಶ್ವರನು ಅಲ್ಲಿಯೇ ಒಂದು ವಟವೃಕ್ಷವಾಗಿ ನಿಂತುಕೊಂಡನು.

ಇತ್ತ ಪಾರ್ವತಿಯು ವೈಕುಂಠಪತಿಗೆ ಶರಣಾಗತಳಾಗಲು ನಾರಾಯಣನು ತ್ರಿಲೋಕ ಸುಂದರಿಯಾದ ಮೋಹಿನೀ ವೇಷವನ್ನು ಧರಿಸಿ, ದೈತ್ಯನೆಡೆಗೆಬಂದನು. ರಕ್ಕಸನು ಈ ಸ್ತ್ರೀ ರೂಪಕ್ಕೆ ಮೋಹಿಸಿ, ಇವಳ ಸೌಂದರ್ಯವು ಪಾರ್ವತಿ-ಲಕ್ಷ್ಮಿಯರಿಗೆ ಸಹ ಇಲ್ಲವೆಂದು ಧ್ಯಾನಿಸಿ, ಇವಳ ಹತ್ತರ ಬಂದು, " ಮಾನಿನೀಮಣಿ! ನಿನ್ನ ಈ ರೂಪಕ್ಕೆ ಮರುಳಾಗಿ ಭ್ರಾಂತನಾಗಿರುವೆನು. ದಯಮಾಡಿ, ನನ್ನನ್ನು ಹೊಂದಬಾರದೇ ! ಪಂಚಶರನ ಬಾಧೆಯು ಬಹಳೇ ಆಗಿರುವದು. ಆ ಸಂಕಟವನ್ನು ಕಳೆದರೆ ನಿನ್ನ ದಾಸನಾಗುವೆನು. ನೀನು ಹೇಳಿದಂತೆ ಕೇಳುವೆನು, " ಎಂದು ಅನೇಕ ವಿಧದಿಂದ ಬೆಸಗೊಳ್ಳಲಾಗಿ ಮೋಹಿನಿಯು ' ರಕ್ಕಸನೇ ! ಏನೂ ಚಿಂತೆಯಿಲ್ಲ. ನಿನ್ನಿಷ್ಟದಂತೆ ವರ್ತಿಸುವೆನು. ಆದರೆ ನನ್ನದೊಂದು ವ್ರತವಿದೆ; ಏನಂದರೆ ನನ್ನ ಕುಲದೇವಿಯಾದ ಆ ವಟವೃಕ್ಷಕ್ಕೆ ನನ್ನ ಲಗ್ನವಾಗುವ ಮುಂದೆ ನಾನು ಹೇಗೆ ಕುಣಿಯುವೆನೋ ಆದಕಂತೆ ನನ್ನ ಗಂಡನ ವಶದಿಂದ ಕುಣಿಸುವೆನು, ಎಂದು ಬೇಡಿಕೊಂಡಿರುವೆನು. ಕಾರಣ ನಾನು ನರ್ತನಮಾಡಿದಂತೆ ನೀನು ಮಾಡಬೇಕು. ಅದರಲ್ಲಿ ಏನದರೂ ವ್ಯತ್ಯಾಸವಾದರೆ ನನ್ನ ದೇವತೆಯು ಕೋಪಿಷ್ಟಳಾಗಿ ನಿನ್ನನ್ನು ಕೊಂದೇಬಿಡುವಳು " ಎಂದು ಕೇಳಲಾಗಿ ರಕ್ಕಸನು, ಇವಳ ಮಧುರ ವಾಕ್ಯಕ್ಕೆ ಮರುಳಾಗಿ, " ಹಾಗೆಯೇ ಆಗಲಿ ! " ಎಂದು ಒಡಂಬಟ್ಟನು; ಸಕಲ ದೇವತೆಗಳು ಈ ಚಮತ್ಕಾರವನ್ನು ನೋಡಲಿಕ್ಕೆ ವಿಮಾನಾರೂಢನಾಗಿ ಆಕಾಶಮಾರ್ಗದಲ್ಲಿ ಬಂದರು. ಮೋಹಿನಿಯು ದೈತ್ಯನೊಂದಿಗೆ ವಟವೃಕ್ಷದ ಕೆಳಬದಿಯಲ್ಲಿ ನರ್ತನ

ಮಾಡಲಿಕ್ಕೆ ಆರಂಭಿಸಿದಳು. ಇವಳಂತೆ ರಕ್ಕಸನಾದರೂ ಕುಣಿಯಹತ್ತಿದನು. ಕೆಲವು ಕಾಲದ ಮೇಲೆ ದೈತ್ಯನಚಿತ್ತವು ಮೋಹಿನಿಯಲ್ಲಿ ಲೀನವಾಯಿತು ಮೋಹಿನಿಯು ಮನೋಹರರಾಗವನ್ನು ಮಾಡುತ್ತಾ, ಹಾವಭಾವಗಳನ್ನು ಮಾಡುತ್ತಾ ತನ್ನ ಹಸ್ತವನ್ನು ತಲೆಯಮೇಲೆ ಇಟ್ಟುಕೊಂಡಳು. ಅದರಂತೆ ದೈತ್ಯನಾದರೂ ತನ್ನ ಹಸ್ತವನ್ನು ತಲೆಯಲ್ಲಿಟ್ಟುಕೊಂಡ, ಕೂಡಲೇ ಭಸ್ಮವಾಗಿಬಿದ್ದನು. ದೇವತೆಗಳು ಪುಷ್ಪವೃಷ್ಟಿಮಾಡಿದರು. ಈಶ್ವರನು ನಿಜರೂಪವನ್ನು ತಾಳಿದನು. ವಿಷ್ಣುವು ಪೂರ್ವದ ರೂಪವನ್ನು ಹೊಂದಿದನು. ಆ ಕಾಲದಲ್ಲಿ ಶಂಕರನು ಮೋಹಿನಿಯನ್ನು ಕಂಡು ವೀರ್ಯಬಿಟ್ಟಿದ್ದನು. ಅದು ಎಂಟು ಭಾಗವಾಯಿತು. ಅದರಿಂದ ಅಷ್ಟಭೈರವರು ಹುಟ್ಟಿದರು. ಅನಂತರ ಹರಿ-ಹರರು ಪರಸ್ಪರವಾಗಿ ಆಲಿಂಗಿಸಿ, ಸಂತೋಷದಿಂದ ಕೈಲಾಸಕ್ಕೆ ಬಂದರು. ಅಂಬಿಕೆಯು ಈರ್ವರನ್ನು ಪೂಜಿಸಿದಳು. ಇತ್ತ ಸಕಲ ಬ್ರಹ್ಮಾಂಡಗಳಲ್ಲಿ ಭಸ್ಮಾಸುರನು ನಾಶವಾದನೆಂಬ ವಾರ್ತೆಯು ಹಬ್ಬಿತು. ಸಕಲ ಜನರು ಸಂತುಷ್ಟರಾಗಿ ಅರಿಷ್ಟವು ಪರಿಹಾರವಾಯಿತೆಂದು ಹರಿ-ಹರರನ್ನು ಧ್ಯಾನಿಸುತ್ತಾ ಆನಂದ-ಸಮುದ್ರದಲ್ಲಿ ಮುಳುಗಿದರು. .... .... *

೧೨ ನೇ ಅಧ್ಯಾಯ ಸಂಪೂರ್ಣವಾದುದು.



## ೧೩ ನೇ ಅಧ್ಯಾಯ ಪ್ರಾರಂಭವು.

## ವೀರಭದ್ರಾವತಾರ, ಗಿರಿಜಾಕಲ್ಯಾಣ ಮತ್ತು ತಾರಕಾಸುರನ — ಕಥೆಗಳು. —



# ವೀರಭದ್ರಾವತಾರ.

ಒಂದಾನೊಂದು ದಿವಸದಲ್ಲಿ ಯಾವದೋ ಒಂದು ಕಾರ್ಯದ ಉದ್ದಿಶ್ಯವಾಗಿ ಸಕಲ ದೇವತೆಗಳು, ಕೈಲಾಸಕ್ಕೆ ಬಂದಕಾಲದಲ್ಲಿ ದಕ್ಷಪ್ರಜಾಪತಿಯಾದರೂ ಅಲ್ಲಿಗೆ ಬಂದಿದ್ದನು. ಆ ಕಾಲದಲ್ಲಿ ಶಂಕರನು ತನಗೆ ಯೋಗ್ಯ ಸನ್ಮಾನಮಾಡಲಿಲ್ಲವೆಂಬ ಸಿಟ್ಟಿನಿಂದ ಹಿಂತಿರುಗಿ ತನ್ನ ಪುರಕ್ಕೆ ಬಂದು ಶಿವದ್ವೇಷಮಾಡಹತ್ತಿದನು. ಅಯ್ಯೋ! ಸ್ಮಶಾನವಾಸಿಯೂ, ದಿಗಂಬರನೂ, ಸರ್ಪಭೂಷಣನೂ, ರುಂಡಮಾಲಾಧರನೂ, ಪಿಶಾಚಿಗಳ ನಾಯಕನೂ, ಅಶುಚಿಯೂ ಆದ ಶಿವನಿಗೆ ನಿರರ್ಥಕವಾಗಿ ಮಗಳನ್ನು ಕೊಟ್ಟೆನಲ್ಲ ! ಶಂಕರನಿಗೆ ಬುದ್ಧಿಯಿಲ್ಲ !! ಹುಚ್ಚನಂತೆ ಕುಣಿ

ಯುತ್ತಿರುವನು ! ಉತ್ತಮರು-ಅಧಮರು, ಎಂಬುದನ್ನು ತಿಳಿಯದೆ ತನ್ನನ್ನು ಪೂಜಿಸಿದವರಿಗೆ ವರಗಳನ್ನು ಕೊಡುವನು !! ಯಾವಾಗಲೂ ಕೆಟ್ಟಮಾರ್ಗದಲ್ಲಿ ವರ್ತಿಸುವನು ! ಇವನನ್ನು ದೇವರೆಂದು ಹೇಗೆ ನಂಬಬೇಕು ? ಇವನ ಸಮಾನ ನೀಚರನ್ನು ಜಗತ್ತಿನಲ್ಲಿ ಕಾಣೆನು, ಎಂದು ಅನೇಕ ವಿಧವಾಗಿ ನಿಂದೆ ಮಾಡಹತ್ತಿದನು. ಒಂದು ದಿವಸ ದಕ್ಷನು ಯಜ್ಞಮಾಡಬೇಕೆಂದು ಸಾಹಿತ್ಯ ಸಿದ್ಧಪಡಿಸಿ, ಸಕಲ ದೇವತೆಗಳನ್ನೂ, ಋಷಿಗಳನ್ನೂ, ತನ್ನ ಎಲ್ಲ ಹೆಣ್ಣುಮಕ್ಕಳನ್ನೂ ಯಜ್ಞ ಮಂಟಪಕ್ಕೆ ಕರಿಸಿದನು. ಆದರೆ ಶಿವದ್ವೇಷಿಯಾದ ಅವನು ಮೂಲ ಶಂಕರನನ್ನೂ, ತನ್ನ ಮಗಳಾದ ದಾಕ್ಷಾಯಣಿಯನ್ನೂ ಕರೆಯಲಿಲ್ಲ. ದಕ್ಷನಿಗೆ ಆಯುಷ್ಯ ಸಮೀಪವಾದ್ದರಿಂದ ಈ ದುರ್ಬುದ್ಧಿಯು ಉತ್ಪನ್ನವಾಯಿತು. ಯಾವಮನುಷ್ಯನಾದರೂ ಜಪ-ತಪ-ಹೋಮ ಮೊದಲಾದ ಯಾವಕಾರ್ಯದಲ್ಲಿಯಾದರೂ ಶಂಕರನನ್ನು ಭಜಿಸುವದಿಲ್ಲವೋ ಆ ಕಾರ್ಯಕ್ಕೆ ಅಸಂಖ್ಯ ವಿಘ್ನಗಳು ಬರುವವು. ಶಿವದ್ವೇಷಿಯು ಚಾಂಡಾಲನಿಗಿಂತಲೂ ಕಡೆಯುವನೆಂದು ತಿಳಿದು ಅವನ ಮುಖವನ್ನು ಸಹ ನೋಡಲಾಗದು.

ಇದು ಇರಲಿ! ಅತ್ತ ಕೈಲಾಸದಲ್ಲಿ ಭಾಮಿನಿಯು ತನ್ನ ಪಿತನು ಯಜ್ಞ ಸಮಾರಂಭ ಮಾಡುವನೆಂದು ಎರಡನೆಯವರ ಮುಖದಿಂದ ತಿಳಿದು, ತನ್ನನ್ನು ಕರೆಯಲಿಕ್ಕೆ ಬರುವನೆಂದು ಮಾರ್ಗ ಪ್ರತೀಕ್ಷೆಮಾಡುತ್ತಿದ್ದಳು. ಅದು ನಿರರ್ಥಕವಾಗಲು ಅಂಬಿಕೆಯು ಶಂಕರನೆಡೆಗೆ ಬಂದು, " ದೇವನೇ ! ನನ್ನ ಪಿತನು ಯಜ್ಞ ಮಾಡುತ್ತಿರುವನು. ಅಲ್ಲಿಗೆ ಎಲ್ಲರನ್ನೂ ಕರೆಸಿರುವನು. ನನ್ನೊಬ್ಬಳನ್ನೇ ಮರೆತಿರುವನು. ಕಾರಣ ನಾನೇ ಹೋಗುವೆನು. ಅಪ್ಪಣೆ ಕೊಡಬೇಕು " ಎಂದು ಬೇಸಗೊಳ್ಳಲು ಶಂಕರನು, " ಅಂಬಿಕೇ ವ್ಯರ್ಥವಾಗಿ ನಿನ್ನ ತಂದೆಯ ಗೃಹಕ್ಕೆ ಹೋಗಬೇಡ. ಅವನು ನಿನ್ನನ್ನು ಕರಿಸಲಿಕ್ಕೇನೂ ಮರೆತಿಲ್ಲ. ಮುಖ್ಯ ನನ್ನ ದ್ವೇಷ ಮಾಡುವ ಪ್ರಯುಕ್ತ ನಮಗೆ ಅಪಮಾನ ಮಾಡಬೇಕೆಂದು ಯಾಗವನ್ನಾರಂಭಿಸಿರುವನು. ನೀನು ಅಲ್ಲಿಗೆ ಹೋದರೆ ನಿಶ್ಚಯವಾಗಿ ಅಪಮಾನಹೊಂದುವಿ. ಅವನ ಮುಖವನ್ನು ಸಹ ನೋಡಲಾಗದು, " ಎಂದು ನೀತಿ ವಚನಗಳನ್ನು ಹೇಳುವಷ್ಟರಲ್ಲಿಯೇ ಸುರಮುನಿಯಾದ ನಾರದನು ಅಲ್ಲಿಗೆ ಬಂದು ಶಂಕರನಿಗೆ ಅಭಿವಂದಿಸಿ ಪಾರ್ವತಿಯಹತ್ತರ ಬಂದು, " ಜಗನ್ಮಾತೇ ! ಸುಮ್ಮನೆ ಯಾಕೆ ಕುಳಿತಿರುವಿ! ನಿನ್ನ ತಂದೆಯು ಮಹಾ ಸಮಾರಂಭವನ್ನು ನಡೆಸಿರುವನು. ಅಲ್ಲಿಗೆ ಯಾಕೆ ಹೋಗಲಿಲ್ಲ ? ಒಂದು ವೇಳೆ ನಿನ್ನನ್ನು ಕರೆಯಿಸಲಿಕ್ಕೆ ಮರೆತಿದ್ದರೂ ಪುಣ್ಯಕಾರ್ಯಕ್ಕೆ ಕರೆಯಿಸಬೇಕೆಂಬ ನೇಮವಿಲ್ಲ. ಆದ್ದರಿಂದ ನೀನು ಅಲ್ಲಿಗೆ ಹೋಗಿ ಸಮಾರಂಭವನ್ನು ನೋಡಿಬಾರಮ್ಮಾ ! " ಎಂದು ಉಪದೇಶಿಸಲು, ಹೊತ್ತುವ ಕೆಂಡಕ್ಕೆ ಹುಲ್ಲು ಹಾಕಿದಂತೆ ನಾರದ ವಾಕ್ಯವು ಅಂಬಿಕೆಯ ಹೃದಯದಲ್ಲಿ ನೆಲೆಗೊಂಡಿತು.

ನಂತರ ಅಂಬಿಕೆಯು ನಂದಿಯನ್ನು ಆರೋಹಣಮಾಡಿ ಭೂತಗಳನ್ನು ಸಂಗಡ ಕರೆದುಕೊಂಡು ದಕ್ಷನ ಯಜ್ಞಮಂಟಪಕ್ಕೆ ಬಂದಳು. ಅಲ್ಲಿ ಶಂಕರನ ಹೊರ್ತಾಗಿ ಯಾವತ್ತೂ ದೇವತೆಗಳೂ ಋಷಿಗಳೂ ಬಂದಿದ್ದರು. ಅತಿ ಮನೋಹರವಾದ ಮಂಟಪಕ್ಕೆ ಅಂಬಿಕೆಯು ಬಂದದ್ದನ್ನು ಕಂಡು ಸಕಲರಿಗೂ ಸಂತೋಷವಾಯಿತು. ಆದರೆ ವೇದಿಕೆಯ ಹತ್ತರ ಕುಳಿತಿದ್ದ ದಕ್ಷನು ದೇವಿಯು ಬಂದದ್ದನ್ನು ಕಂಡು ಹಿಂದಕ್ಕೆ ತಿರುಗಿ ಅಂಬಿಕೆಯನ್ನು ಮಾತಾಡಿಸದೆ, ಮೋರೆಯನ್ನು ಭೂಮಿಯಲ್ಲಿಟ್ಟು ಸುಮ್ಮನೆ ಕುಳಿತನು. ದೇವಿಯು ನಂದಿಯಿಂದಿಳಿದು ತಂದೆಯಹತ್ತರ ಬಹಳ ವೇಳೆಯವರೆಗೆ ನಿಂತರೂ ದಕ್ಷನು ತನ್ನ ಮೋರೆಯನ್ನು ಸಹ ನೋಡಲಿಲ್ಲ. ತಾಯಿಯ ಕಡೆಗೆ ತಿರುಗಿ ನೋಡಿದರೂ ಅವಳುಸಹ ಮಾತಾಡಿಸಲಿಲ್ಲ. ಆದೇಕಾಲದಲ್ಲಿ ಅಂಬಿಕೆಯ ಮತ್ತೊರ್ವ ತಂಗಿಯು ಬಂದಕೂಡಲೆ ದಕ್ಷನೂ ಮತ್ತು ತಾಯಿಯೂ ಬಹುಮಾನಮಾಡಿದ್ದನ್ನೂ, ತನಗೆ ಅಪಮಾನ ಮಾಡಿದ್ದನ್ನೂ ಪ್ರತ್ಯಕ್ಷವಾಗಿ ಕಂಡು ಕೋಪಾಟೋಪ ಪೀಡಿತಳಾದಳು, ಜಗನ್ಮಾತೆಯ ಅಪಮಾನವನ್ನು ಕಂಡು, ಸಕಲ ದೇವತೆಗಳು ಈವೊತ್ತಿಗೆ ಏನೋ ಪ್ರಳಯ ಬರುವದೆಂದು ನಡುಗಲಾರಂಭಿಸಿದರು. ನಂತರ ಪಾರ್ವತಿಯು ಸಿಟ್ಟಿನಿಂದ ಇವನು ಇಷ್ಟು ಅಪಮಾನಮಾಡಿದಮೇಲೆ ಈದೇಹಕ್ಕೆ ದಾಕ್ಷಾಯಣಿಯೆಂಬ ಹೆಸರಾದರೂ ಯಾಕೆಬೇಕು? ಎಂದು ನುಡಿದು, ಅದೇ ಅಗ್ನಿಕುಂಡದಲ್ಲಿ ಹಾರಿ ಪ್ರಾಣವನ್ನು ನೀಗಿದಳು. ಶಿವದೂತರು ಗಾಬರಿಯಾಗಿ ಶಿವನಕಡೆಗೆ ಬಂದರು; ಭೂಮಿಯು ಥರಥರ ಕಂಪಿಸಿತು; ಸಕಲ ದೇವತೆಗಳು ಘಾತವಾಯಿತೆಂದು ನುಡಿದರು; ಪಟ್ಟಣದಲ್ಲಿ ಅಪಶಕುನಗಳಾಗಹತ್ತಿದವು. ಇತ್ತ ಶಿವದೂತರು ನಡೆದ ವರ್ತಮಾನವನ್ನು ಶಂಕರನಿಗೆ ಅರುಹಲು, ಪರಮೇಶ್ವರನು ಮಹಾ ಕೋಪಾಕ್ರಾಂತನಾಗಿ ಜಟೆಯನ್ನು ನೆಲಕ್ಕೆ ಅಪ್ಪಳಿಸಲು, ಕೋಟಿಸೂರ್ಯರು ಏಕಕಾಲಕ್ಕೆ ಹುಟ್ಟಿದಂತಾಯಿತು. ಮತ್ತು ಅವನ ಆರು ಭುಜಗಳಲ್ಲಿಯೂ ಶಸ್ತ್ರಾಸ್ತ್ರಗಳನ್ನು ಧರಿಸಿದ ಭಯಂಕರ ರೂಪನಾದ ವೀರಭದ್ರನು ಉತ್ಪನ್ನನಾಗಿ ಜಗದೀಶನನ್ನು ಸ್ತವನಮಾಡಲಾಗಿ, ಶಂಕರನು ದಕ್ಷನನ್ನು ನಾಶಮಾಡೆಂದು ಅಪ್ಪಣೆಕೊಟ್ಟನು. ಆಗ ವೀರಭದ್ರನು ' ತಥಾಸ್ತು ' ಎಂದು ಸಕಲರುದ್ರ ಗಣರೊಂದಿಗೆ ಸಿಂಹನಾದ ಮಾಡುತ್ತ ದಕ್ಷನ ಯಜ್ಞ-ಮಂಟಪಕ್ಕೆ ತೆರಳಿದನು.

ವೀರಭದ್ರನ ಅಬ್ಬರವನ್ನು ಕೇಳಿ ಭೂಮಿಯು ನಡುಗಿತು; ಕುಲಗಿರಿಗಳು ಚಲಿಸಿದವು; ನಕ್ಷತ್ರಗಳು ಪತನವಾದವು; ಕೆಂಧೂಳಿಯು ಆಕಾಶವನ್ನು ವ್ಯಾಪಿಸಿತು; ಇದನ್ನು ಕಂಡು ಯಜ್ಞಮಂಟಪದಲ್ಲಿ ಕುಳಿತ ದೇವತೆಗಳು ಏನೋ ಅನರ್ಥವು ಸಂಭವಿಸುವದೆಂದು ದಿಕ್ಕುದಿಕ್ಕಿಗೆ ಓಡಿದರು; ಚಂದ್ರನು ಕೋಳಿಯಾಗಿಯೂ, ಯಮನು ಬಕನಾಗಿಯೂ, ಸೂರ್ಯನು ಪಾರಿವಾಳವಾಗಿಯೂ, ಇದರಂತೆ ಸರ್ವರೂ ರೂಪವನ್ನು ಬದಲಾಯಿಸಿ ಸಲಾಯನ ಮಾಡಿದರು. ವೀರಭದ್ರನು ಮಂಟಪವನ್ನು

ಪ್ರವೇಶಿಸಿ ಎಷ್ಟೋ ದೇವತೆಗಳ ಮಾನಭಂಗಮಾಡಿ ದಕ್ಷನನ್ನು ಹಿಡಿದೆಳೆ ಮೂರ್ಖಾ ! ಶಿವದ್ವೇಷಿಯಾಗಿ ಬದುಕುವಿಯಾ ” ಎಂದು ಶಸ್ತ್ರದಿಂದ ಅವ ಕೊರಳನ್ನು ಕೊಯ್ದು, ಆ ರುಂಡವನ್ನು ತನ್ನ ಕಾಲಿನಿಂದ ಭೂಮಿಯಲ್ಲಿ ಒ ದನು, ಇದನ್ನು ಕಂಡು ಸರ್ವರೂ ಹಾ ಹಾಕಾರ ಮಾಡಿದರು. ಬಳಿಕ ವಿಷ್ಣು ಬ್ರಹ್ಮರು ಕೂಡಿ ಕೈಲಾಸಕ್ಕೆ ಹೋಗಿ ಶಂಕರನನ್ನು ಪ್ರಾರ್ಥಿಸಲಾಗಿ, ಅವ ಸಂತುಷ್ಟನಾಗಿ, ಅವರೊಡನೆ ಯಜ್ಞ ಮಂಟಪಕ್ಕೆ ಬಂದು ದಕ್ಷನ ಅವಸ್ಥೆಯನ್ನು ಕಂಡು, ವೀರಭದ್ರನಿಗೆ ರುಂಡವನ್ನು ಕೇಳಲಾಗಿ ಆ ವೀರಭದ್ರನು. “ ರು ವನ್ನು ಕೊಡುವದಿಲ್ಲ. ಯಾಕಂದರೆ ಶಿವ-ದ್ವೇಷಿಯಾದ ಮನುಷ್ಯನ ಅವಸ್ಥೆ ಹೀಗೆಯೇ ಆಗುವದೆಂಬುವದು ಎಲ್ಲರಿಗೂ ತಿಳಿಯಲಿ ! ಯಾವನು ಹರಿ-ಹರ ಭೇದಬುದ್ಧಿ ಮಾಡುವನೋ ಅವನ ಅವಸ್ಥೆಯಾದರೂ ಹೀಗೆಯೇ! ಯಾವನು ಶಿ ದ್ವೇಷಿಯಾಗುವನೋ ಅವನಿಗೆ ಕುರಿಯ ಜನ್ಮಬರಲಿ !! ಇದು ಜನರಿಗೆ ತಿಳಿಯು ವದಕ್ಕೆ ಇವನೇ ಕಾರಣನಾಗಲಿ !!! ಎಂದು ಹೇಳಿ ಟಗರಿನ ರುಂಡವನ್ನು ಕೊಡ ಅದನ್ನು ಶಂಕರನು ದಕ್ಷನ ಮುಂಡಕ್ಕೆ ಹಚ್ಚಿ ಸಜೀವವನ್ನಾಗಿ ಮಾಡಿ ಸಂಚಾ ರ್ಥವಾಗಿ ತೆರಳಿದನು.



# ಗಿರಿಜಾಕಲ್ಯಾಣ

ಇತ್ತ ಅಂಬಿಕೆಯು ದಕ್ಷನ ಯಜ್ಞ-ಕುಂಡದಲ್ಲಿ ದೇಹವನ್ನು ಬಿಟ್ಟ ಬಳಿ ಹಿಮಾಚಲನ ಹೆಂಡತಿಯಾದ ಮೇನಕೆಯಲ್ಲಿಪಾರ್ವತಿಯೆಂಬ ಹೆಸರಿನಿಂದ ಅ ತರಿಸಿದಳು. ಶಂಕರನು ತಿರುಗುತ್ತ ತಿರುಗುತ್ತಾ ಆನಂದವನದ ಮಹಾಸ್ಮಶಾನದ ಬಂದು ಸಹಸ್ರವರುಷ ಪರ್ಯಂತರವಾಗಿ ತಪಮಾಡುತ್ತ ಕುಳಿತನು. ಅಲ್ಲಿಗೆ ಪ್ರ ಧಿನ ಪಾರ್ವತಿಯು ಬಂದು ಶಂಕರನ ದರ್ಶನ ತೆಗೆದುಕೊಳ್ಳುತ್ತಿದ್ದಳು. ಇತ್ತ ತಾರಕಾಸುರನೆಂಬ ದೈತ್ಯನ ಪುತ್ರರಾದ ತಾರಕಾಕ್ಷ, ವಿದ್ಯುನ್ಮಾಲಿ, ಕಮ ಲೋಚನರೆಂಬ ಮೂವರು ಶಂಕರನನ್ನು ಒಲಿಸುವದಕ್ಕೋಸುಗ ದಿನಾಲುಸಹ ಕಮಲಗಳನ್ನು ಲಿಂಗಕ್ಕೆ ಅರ್ಪಿಸುತ್ತ ತಪಸ್ಸು ಮಾಡಿದರು. ಒಂದು ದಿವಸ ಮೂರು ಸಹಸ್ರ ಕಮಲಗಳನ್ನು ಅರ್ಚಿಸುವ ಕಾಲದಲ್ಲಿ ಒಂದು ಕಮಲವು ಕಡಿ ಯಾಗಲಾಗಿ, ತಮ್ಮ ನೇತ್ರವನ್ನು ತೆಗೆದು ಏರಿಸಿದರು. ಮತ್ತೊಂದು ಕಡಿಮೆಯ ಗಲಾಗಿ ತಮ್ಮ ಶಿರವನ್ನು ಕೊಯ್ದು ಏರಿಸಿದರು, ಇದನ್ನು ಕಂಡು ಶಂಕರನು ಪ್ರ ನ್ನನಾಗಿ ಬಂದು ಅವರನ್ನು ಎಬ್ಬಿಸಿ ನಿಮಗೆ ಆಕಾಶ ಮಾರ್ಗದಲ್ಲಿ ಯಾವಾಗಲ ತಿರುಗುತ್ತಿರುವ ಮೂರು ಪಟ್ಟಣಗಳು ದೊರೆಯುವವು. ಅವು ಸಹಸ್ರ ವ ಕ್ಕೊಮ್ಮೆ ಅರ್ಧ ನಿಮಿಷ ಪರ್ಯಂತರವಾಗಿ ಒಂದೇಸ್ಥಾನದಲ್ಲಿ ಕೂಡುವವು.

ಕಾಲಕ್ಕೆ ಮಾತ್ರ ಯಾವನಾದರೂ ಧನುರ್ವಿದ್ಯಾ ಪ್ರವೀಣನು ಲಕ್ಷ್ಯಸಾಧಿಸಿ ಹೊಡೆದರೆ ನೀವು ನಾಶವಾಗುವಿರಿ. ಇಲ್ಲದಿದ್ದರೆ ಪುನಃ ಸಹಸ್ರವರ್ಷ ಬದುಕುವಿರಿ, ಎಂದು ವರವನ್ನುಕೊಟ್ಟು ಬಯಲಾದನು. ಅಲ್ಲಿಂದ ದೈತ್ಯರು ಕೂಡಲೇ ಕೊಬ್ಬಿನಿಂದುಬ್ಬಿದ ಕಬ್ಬಿನ ಮೇಲಿನ ಜೇನು ತುಪ್ಪದಂತೆ ಅಹಂಕಾರ ವಿಶಿಷ್ಟರಾಗಿ ಸಕಲರನ್ನು ಬಾಧೆಪಡಿಸಲಾರಂಭಿಸಿದರು. ಅಲ್ಲಿಂದ ಸಕಲ ದೇವತೆಗಳೂ, ಋಷಿಗಳೂ, ವಿಷ್ಣುವಿಗೆ ಶರಣಾಗತರಾಗಲು, ಮುಂದೆ ಕಮಲಾಕಾಂತನು, ಎಲ್ಲರನ್ನು ಕರೆದುಕೊಂಡು ಶಂಕರನ ಹತ್ತಿರಬಂದು ಸ್ತೋತ್ರಮಾಡಲಾಗಿ ಪರಮೇಶ್ವರನು ಪ್ರಸನ್ನನಾಗಿ ಯಾಕೆ ಬಂದಿರುವಿರೆಂದು ವಿಚಾರಿಸಲು ತ್ರಿಪುರಾಸುರರ ಕೃತಿಯನ್ನು ಹೇಳಿದರು

ನಂತರ ಶಂಕರನು ಭೂಮಿಯನ್ನು ರಥವನ್ನಾಗಿಮಾಡಿ, ಅದಕ್ಕೆ ಸೂರ್ಯ ಚಂದ್ರರನ್ನೇ ಗಾಲಿಗಳನ್ನು ಮಾಡಿ, ಕನಕಾಚಲವನ್ನು ಧನಸ್ಸು ಮಾಡಿ, ಮಂದರ ಪರ್ವತವನ್ನು ಬತ್ತಳಿಕೆ ಮಾಡಿ, ವಿಷ್ಣುವನ್ನು ಬಾಣಮಾಡಿ, ನಾಲ್ಕು ವೇದಗಳನ್ನು ಅಶ್ವಗಳನ್ನಾಗಿಮಾಡಿ, ಮಹಾ ಶೇಷನನ್ನು ರಜ್ಜುಮಾಡಿ, ಬ್ರಹ್ಮನನ್ನು ಸಾರಥಿಮಾಡಿ, ಸಕಲ ವಿಭವಗಳೊಂದಿಗೆ ಶಂಕರನು ಆ ರಥದಲ್ಲಿ ಕೂಡ್ರಲು ಇವನ ಭಾರವನ್ನು ತಡೆಯದೆ ರಥವು ಕೆಳಗಿಳಿಯಲಾರಂಭಿಸಿತು. ಕೂಡಲೆ ನಂದಿಯು ತನ್ನ ಕೋಡಿನಿಂದ ಮೇಲಕ್ಕೆತ್ತಲಾಗಿ ಶಂಕರನು ಒಂದು ಪಾದವನ್ನು ರಥದಲ್ಲಿಯೂ, ಮತ್ತೊಂದು ಪಾದವನ್ನು ನಂದಿಯಮೇಲೆಯೂ ಇಟ್ಟುತೀಕ್ಷ್ಣಬಾಣದಿಂದ ಸಕಲ ದಾನವರನ್ನೂ ನಾಶಮಾಡಿದನು, ಆದರೆ ದೈತ್ಯರ ಹತ್ತಿರ ಅಮೃತಕುಂಡವಿದ್ದ ಕಾರಣ ಪುನಃ ಪುನಃ ಜೀವಿಸುತ್ತಿದ್ದರು. ಇದನ್ನು ಕಂಡು ಶಿವನು ಮೋಘಾಸ್ತ್ರದಿಂದ ಅಮೃತವನ್ನು ಶೋಷಿಸಿದನು. ಸಕಲ ದಾನವರು ನಾಶವಾದ ಬಳಿಕ ತ್ರಿಪುರಾಸುರರನ್ನು ನಾಶಮಾಡುವ ಕಾಲವನ್ನು ಸಾಧಿಸುತ್ತ ಕುಳಿತನು.

ಇತ್ತ ನಾರಾಯಣನು ತ್ರಿಪುರರ ಹೆಂಡಂದಿರು ಮಹಾ ಪತಿವ್ರತೆಯರಿದ್ದ ಪ್ರಯುಕ್ತ ಅವರು ಅಜಯರಾಗಿರುವರೆಂಬದನ್ನರಿತು ಆ ಸ್ತ್ರೀಯರ ಹೃದಯದಲ್ಲಿ ಪ್ರವೇಶಿಸಿ ಚಾರ್ವಾಕಶಾಸ್ತ್ರವನ್ನು ಪ್ರಕಟಮಾಡಿದನು. ಆದರಿಂದ ಆಸ್ತ್ರೀಯರ ಚಿತ್ತವು ತಿರುಗಿ, ಪಾತಿವ್ರತ್ಯವು ಭಂಗವಾಯಿತು. ಇತ್ತ ಶಂಕರನು ಕಾಲವನ್ನು ಸಾಧಿಸಿ ತ್ರಿಪುರಗಳು ಒಂದೇ ಸ್ಥಾನಕ್ಕೆ ಕೂಡಿದ ವೇಳೆಯಲ್ಲಿಯೇ ವಿಷ್ಣುರೂಪಿಯಾದ ಪಾಶುಪತಾಸ್ತ್ರವನ್ನು ಯೋಜಿಸಿದನು. ಆ ಅಸ್ತ್ರದ ಅಬ್ಬರವನ್ನು ಕಂಡು ದೇವತೆಗಳು ಕಂಗೆಟ್ಟರು; ದೈತ್ಯರು ಗಿರಿ ಕಂದರಗಳಲ್ಲಿ ಓಡಿದರು. ನಂತರ ತ್ರಿಪುರವು ದೈತ್ಯರಿಂದ ಯುಕ್ತವಾಗಿ ದಹನವಾಯಿತು. ದೇವತೆಗಳು ಹೂ ಮಳೆಗರೆದರು. ಎಲ್ಲರೂ ಸಂತುಷ್ಟರಾಗಿ ತಮ್ಮತಮ್ಮ ಸ್ಥಾನಕ್ಕೆ ತೆರಳಿದ ಬಳಿಕ ತ್ರಿಪುರಾಸುರರ ತಂದೆಯಾದ ತಾರಕಾಸುರನು ತನ್ನ ಮಕ್ಕಳನ್ನು ಶಂಕರನು ಕೊಂದನೆಂದು ದ್ವೇಷಮಾಡುತ್ತ ಸಕಲ ದೇವತೆಗಳನ್ನು ಸ್ಥಳಬಿಟ್ಟು ಓಡಿಸಿ, ಋಷಿಗಳಿಗೆ ಪೀಡೆ

ಯನ್ನುಂಟುಮಾಡಲಾಗಿ ಸಕಲ ದೇವತೆಗಳು, ಬ್ರಹ್ಮ, ವಿಷ್ಣು ಮೊದಲಾದವರು ಒಂದೆಡೆಗೆ ಕುಳಿತು, ಈ ದುಷ್ಟನು ನಾಶವಾಗಬೇಕಾದರೆ ಶಿವನ ಪುತ್ರನೇ ಬರಬೇಕೇಹೊರ್ತು ಮತ್ತ್ಯಾರಿಂದಲೂ ಆಗಲರಿಯದು. ಕಾರಣ ಶಿವಪಾರ್ವತಿಯರನ್ನು ಕೂಡುವಂತೆ ಮಾಡಬೇಕೆಂದು ಆಲೋಚಿಸಿ, ಮನ್ಮಥನನ್ನು ಕರೆದು ಈ ವರ್ತಮಾನವನ್ನು ತಿಳುಹಿಸಲು. ಅವನು, ' ತಥಾಸ್ತು ' ಎಂದು ರತಿಯಿಂದ ಯುಕ್ತನಾಗಿ ಶಿವನೆಡೆಗೆಬಂದು ತಾನು ಶಂಕರನ ದೇಹವನ್ನು, ರತಿಯಿಂದ ಉಮೆಯ ದೇಹವನ್ನು ಪ್ರವೇಶಿಸಿ, ಮನ್ಮಥನು ಪಂಚಶರಗಳಿಂದ ಶಂಕರನಿಗೆ ಹೊಡೆಯಲಾಗಿ ಶಂಕರನ ಚಿತ್ತವು ಚಂಚಲವಾಯಿತು. ಉಮೆಯು ಕಾಮಾತುರಳಾದಳು. ಆಕಾಲದಲ್ಲಿ ಸಕಲ ವೃಕ್ಷಗಳು ಫಲ ಪುಷ್ಪಗಳಿಂದ ಮೆರೆದವು; ಮಂದಮಾರುತನು ಮಂದ ಮಂದವಾಗಿ ಬೀಸಹತ್ತಿದನು. ಕೋಗಿಲೆಗಳು ಇಂಪಾದ ಗಾನ ಮಾಡಿದವು. ಇದನ್ನು ಕಂಡು ಶಿವನು ಕಣ್ದೆರದು ನೋಡಲಾಗಿ ಎದುರಿಗೆ ಮನ್ಮಥನು ನಿಂತಿದ್ದನು. ಅದನ್ನು ಕಂಡು ಸಿಟ್ಟಿನಿಂದ ಮೂರನೆಯ ಕಣ್ಣು ತೆರೆದು ಅವನನ್ನು ಸುಟ್ಟುಬಿಟ್ಟನು. ಆ ಹೊತ್ತು ಫಾಲ್ಗುಣ ಶುದ್ಧ ಪೌರ್ಣಿಮೆ ಇತ್ತು, ಸಕಲ ಭೂತಗಣಂಗಳು ಮನ್ಮಥನಿಗೆ ಭೀಭತ್ಸ ವಚನಗಳನ್ನಾಡುತ್ತ ಅವನ ಭಸ್ಮವನ್ನು ಲೇಪಿಸಿಕೊಂಡರು. " ಶಂಕರನು ಯಾವ ಮನುಜನು ಈ ಹೊತ್ತು ಮನ್ಮಥ ಮೂರ್ತಿಯನ್ನ ದಹನ ಮಾಡದೆ ಅಸಹ್ಯ ವಚನಗಳನ್ನು ನುಡಿಯುವನೋ ಅವನಿಗೆ ಜೀವವಿರುವವರೆಗೂ ಬಾಧೆಯಾಗಲಿಯೆಂದು ಹೇಳಿ ಕೈಲಾಸಕ್ಕೆ ತೆರಳಿದನು. " ಪತಿಯು ಮೃತವಾದದ್ದನ್ನು ರತಿಯು ಕಂಡು ಮಹಾ ಶೋಕವನ್ನು ಮಾಡಲು, ಶಂಕರನು ಅವಳಿಗೆ ಸಮಾಧಾನಹೇಳಿ, ಕೃಷ್ಣಾವತಾರದಲ್ಲಿ ನಿನ್ನ ಪತಿಯು ಕೃಷ್ಣನ ಮಗನಾಗಿ ಹುಟ್ಟುವನು. ಆ ಕಾಲಕ್ಕೆ ನಿನ್ನನ್ನುದ್ಧರಿಸುವನು. ನಿನ್ನ ಪತಿಗೆ ಬ್ರಹ್ಮನು ತನ್ನ ಮಗಳಾದ ಸರಸ್ವತಿಯನ್ನು ಭೋಗಿಸಿದ ಕಾಲದಲ್ಲಿ ಶಿವನೇತ್ರದಿಂದ ದಗ್ಧವಾಗೆಂದು ಶಾಪ ಕೊಟ್ಟಿದ್ದನು. ಅದರಿಂದ ಈ ಹಾಡಾಯಿತು. ಎಂದು ಹೇಳಿಕಳುಹಿದನು.

ಇತ್ತ ಹಿಮನ ಪುತ್ರಿಯಾದ ಪಾರ್ವತಿಯು ಶಿವನೇ ಪತಿಯಾಗಬೇಕೆಂಬ ಅಪೇಕ್ಷೆಯಿಂದ ವನದಲ್ಲಿ ಕುಳಿತು ತಪವನ್ನು ಮಾಡುತ್ತಿದ್ದಳು. ಇದನ್ನು ತಿಳಿದು ಸಪ್ತ ಋಷಿಗಳು ಶಿವನೆಡೆಗೆ ಬಂದು, " ದೇವಾ ನಿನ್ನನ್ನು ಕುರಿತು ಅಗಜೆಯು ತಪವನ್ನು ಮಾಡುತ್ತಿರುವಳು. ಅವಳಮೇಲೆ ಅನುಗ್ರಹಿಸಬಾರದೆ ! " ಎಂದು ಬಿನ್ನೈಸಲಾಗಿ ಶಂಕರನು ಒಳ್ಳೇದೆಂದು ಅವಳ ಮನವನ್ನು ಪರೀಕ್ಷಿಸಲೋಸುಗ ಬ್ರಹ್ಮಚಾರಿಯ ವೇಷವನ್ನು ಧರಿಸಿ, ಪಾರ್ವತಿಯ ಹತ್ತರ ಬಂದು, ಇಂಥ ತಪವನ್ನು ಯಾಕೆ ಮಾಡುವಿಯೆಂದು ಕೇಳಲಾಗಿ ಅಂಬಿಕೆಯು ಶಿವನು ಪತಿಯಾಗುವ ಉದ್ದಿಶ್ಯ ಮಾಡುವೆನೆಂದಳು. ಶಿವನು ನಕ್ಕು ಮುಗ್ಧೆ ! ನಿನಗೆ ಬುದ್ಧಿಯಿಲ್ಲ ಶಂಕರನು ಯಾವ ರೂಪಿಯೆಂದು ನೆನೆಸುತ್ತಿ! ಅವನು ಸರ್ಪಭೂಷಣನು; ನೀನು ನವ ಕುಸುಮಧಾರೆಯು. ಅವನು ಸ್ಮಶಾನವಾಸಿಯು; ನೀನು ರಾಜ ಮಂದಿರದಲ್ಲಿ

ವಾಸಮಾಡುವವಳು. ನಿನ್ನ ಹಣೆಯಲ್ಲಿ ಕುಂಕುಮವು; ಅವನ ಹಣೆಯಲ್ಲಿ ಭಸ್ಮವು. ನೀನು ಸುಂದರವಾದ ಉಂಗುರುಗೂದಲುಗಳಿಂದ ಶೋಭಿತಳು; ಅವನು ಭಯಂಕರವಾದ ಜಡೆಯನ್ನು ಧರಿಸಿದವನು. ನೀನು ಕೋಮಲ ಗಾತ್ರೆಯು ಅವನು ಅಶುಚಿಯು. ಅಲ್ಲದೆ ದಿಗಂಬರನು, ಭೂತಗಣವೇಷ್ಟಿತನು. ಹೀಗಿದ್ದುದರಿಂದ ಅವನಿಗೂ ನಿನಗೂ ಕೂಡುವ ಬಗೆಯಾದರೂ ಹೇಗೆ? ಅವನಿಗೆ ಇರಲಿಕ್ಕೆ ಮನೆಯಿಲ್ಲ; ಉಡಲಿಕ್ಕೆ ವಸ್ತ್ರವಿಲ್ಲ; ತಿನ್ನಲಿಕ್ಕೆ ಅನ್ನವಿಲ್ಲ ಇಂಥವನನ್ನು ಮದುವೆ ಮಾಡಿಕೊಂಡರೆ ನಿನಗೇನು ಸೌಖ್ಯಬಂದೀತು? ಕಾರಣ ಮಹಾ ಐಶ್ವರ್ಯವಂತನಾದ ವಿಷ್ಣುವನ್ನಾದರೂ ಲಗ್ನಮಾಡಿಕೋ, ಎಂದು ನುಡಿಯಲಾಗಿ, ಪಾರ್ವತಿಯು ಕೋಪವನ್ನು ತಾಳಿ, “ಮೂರ್ಖಾ! ಶಿವನಿಂದೆಯನ್ನು ಮಾಡಲಿಕ್ಕೆ ನಾಚಿಕೆಯಾದರೂ ಬರುವದಿಲ್ಲವೇ? ಯಾವ ಮನುಷ್ಯನು ಶಿವನಿಂದೆಯನ್ನು ಮಾಡುವನೋ ಅವನ ಮುಖವನ್ನು ಸಹ ನೋಡಲಾಗದು. ನಿನ್ನನ್ನು ಈಗಲೇ ದಂಡಿಸುತ್ತಿದ್ದೆನು ಆದರೆ ಬ್ರಾಹ್ಮಣನೆಂದು ಬಿಡುವೆನು. ನಡೆ! ಎದುರು ನಿಲ್ಲಬೇಡ! ಎಂದು ಗದ್ದರಿಸಲು, ಶಿವನು ಇವಳ ಭಕ್ತಿಗೆ ಮೆಚ್ಚಿ ನಿಜ ರೂಪವನ್ನು ಪ್ರಕಟಮಾಡಿ ವರವಂ ಬೇಡೆಂದು ಕೇಳಲಾಗಿ, ಅಂಬಿಕೆಯು ಹರ್ಷಿತಳಾಗಿ ನಮಸ್ಕರಿಸಿ, ದೇವನೇ! ನನಗೇನೂ ಬೇಡ. ನೀನೇ ಪತಿಯಾಗೆಂದು ಬೆಸಗೊಳ್ಳಲು, ಶಂಕರನು, ‘ತಥಾಸ್ತು’ ಎಂದು ಅದೃಶ್ಯನಾದನು.

ಇತ್ತ ಪಾರ್ವತಿಯು ಮನೆಗೆ ತೆರಳಿದಳು. ಅತ್ತ ದೇವತೆಗಳು, ಯಾವಾಗ್ಯೆ ಪಾರ್ವತಿಗೂ ಶಂಕರನಿಗೂ ವಿವಾಹವಾದೀತೋ ಎಂದು ಹೊಂಚುಹಾಕಿ ಕುಳಿತಿದ್ದರು. ಶಂಕರನು ಗಿರಿಜೆಯನ್ನು ವಿವಾಹ ಮಾಡಿಕೊಳ್ಳುವ ನಿಮಿತ್ಯವಾಗಿ ಸಪ್ತ ಋಷಿಗಳನ್ನು ಹಿಮನಗರಕ್ಕೆ ಕಳುಹಿದನು. ಋಷಿಗಳಾದರೂ ಅರುಂಧತಿಯಿಂದ ಯುಕ್ತರಾಗಿ ಹಿಮನ ಗೃಹಕ್ಕೆ ಬಂದು ಅವನಿಂದ ಪೂಜೆಯನ್ನು ತೆಗೆದುಕೊಂಡು ತಾವು ಬಂದ ವರ್ತಮಾನವನ್ನು ತಿಳುಹಿ ಮನ್ಮಥ ಸಂವತ್ಸರದ ಚೈತ್ರಮಾಸ ಅಷ್ಟಮೀ ದಿನದಲ್ಲಿ ವಿವಾಹ ಮುಹೂರ್ತವನ್ನು ನಿಶ್ಚೈಸಿ ಪುನಃ ಕೈಲಾಸಕ್ಕೆ ಬಂದರು. ಅನಂತರ ಶಂಕರನು ನಂದಿಯಿಂದ ವಿವಾಹಕ್ಕೋಸ್ಕರ ಮೂವತ್ತು ದೇವತೆಗಳನ್ನೂ ಋಷಿಗಳನ್ನೂ ಕರೆಸಿದನು. ಕೂಡಲೇ ನಾರಾಯಣನು ಲಕ್ಷ್ಮಿಯಿಂದ, ಬ್ರಹ್ಮನು ಸರಸ್ವತಿಯಿಂದ, ಇಂದ್ರನು ಶಚಿಯಿಂದ ಯುಕ್ತರಾಗಿ ತಮ್ಮ ತಮ್ಮ ಗಣಗಳೊಂದಿಗೆ ಬಂದರು, ಅಂತು ಕೈಲಾಸದಲ್ಲಿ ಮೂವತ್ತುಮೂರು ಕೋಟಿ ದೇವತೆಗಳೂ, ಎಂಭತ್ತೆಂಟುಕೋಟಿ ಋಷಿಗಳೂ, ಸಿದ್ಧರೂ, ಸಾಧ್ಯರೂ, ಗಂಧರ್ವರೂ, ನಾಗರೂ, ಚಾರಣರೂ, ಗುಹ್ಯಕರೂ, ಸಕಲರೂ ನೆರೆದರು. ನಂತರ ಸುಮೂರ್ತದಲ್ಲಿ ಶಂಕರನು ಎಲ್ಲ ಪರಿವಾರದೊಂದಿಗೆ ಹಿಮನಗರದ ಹತ್ತರ ಬರಲು ಪರ್ವತರಾಜನು ಮಹಾ ಸಮಾರಂಭದಿಂದ ಇದಿರ್ಗೊಂಡು ಹತ್ತು ಸಹಸ್ರಯೋಜನ ಅಗಲವಾದ ಸುವರ್ಣ-ಮಂಟಪದಲ್ಲಿ ತಂದು ಇಳಿಸಿದನು. ವಿವಾಹ ಮುಹೂ

ರ್ತವನ್ನು ಸಾಧಿಸುತ್ತ ಸೂರ್ಯನು ಕುಳಿತನು. ಆಚಾರ್ಯತ್ವವನ್ನು ಬೃಹಸ್ಪತಿಯು ವಹಿಸಿದನು; ಸರ್ವಾಧಿಕಾರವನ್ನು ಬ್ರಹ್ಮನು ವಹಿಸಿದನು. ನಂತರ ವಿವಾಹಕಾಲ ಸಮೀಪವಾಗಲು ವಧೂವರರನ್ನು ಕೂಡಿಸಿ ಅಂತಃಪಟವನ್ನು ಹಿಡಿದು 'ಸುಮುಹೂರ್ತ ಸಾವಧಾನ' ಎಂದು ಅಕ್ಷತೆಗಳನ್ನು ಚೆಲ್ಲಿದರು. ಅಲ್ಲಿಯವರೆಗು ಪಾರ್ವತಿಯ ಮುಖವನ್ನು ಯಾರೂ ನೋಡಿದ್ದಿಲ್ಲ ಯಾವಾಗ್ಯೆ ಅಂತಃಪಟವನ್ನು ತೆಗೆದರೋ ಆ ಕಾಲದಲ್ಲಿ ಕೋಟಿಚಂದ್ರರಂತೆ ಪ್ರಕಾಶಮಾನವಾದ ಪಾರ್ವತಿಯ ಮುಖವನ್ನು ಕಂಡು ಬ್ರಹ್ಮನಿಗೆ ಚಿತ್ತಚಂಚಲವಾಗಿ ವೀರ್ಯಪತನವಾಯಿತು. ಅದರಿಂದ ಅರವತ್ತು ಸಹಸ್ರ ವಾಲಿಖಲ್ಯರೆಂಬ ಋಷಿಗಳು ಉತ್ಪನ್ನರಾದರು. ಇದನ್ನು ಕಂಡು ಶಂಕರನು ಬಹು ಕುಪಿತನಾಗಿ ಬ್ರಹ್ಮನ ಐದನೇ ಮುಖವನ್ನು ಕತ್ತರಿಸಿದನು. ಸರ್ವರೂ ಧೈರ್ಯಗುಂದಿ ಚಿಂತಾತುರರಾದರು. ನಂತರ ವಿಷ್ಣುವು ಬಂದು ಶಂಕರನನ್ನು ಸಮಾಧಾನ ಮಾಡಿದನು. ಅಂದಿನಿಂದ ಬ್ರಹ್ಮನಿಗೆ ಚತುರಾನನನೆಂಬ ಹೆಸರು ಬಂದಿತು. ಮುಂದೆ ನಾಲ್ಕು ದಿವಸಗಳ ವರೆಗೆ ಯಥಾಸಾಂಗವಾಗಿ, ವಿವಾಹ ಮಹೋತ್ಸವ ನಡೆಯಿತು. ಪರ್ವತರಾಜನಿಂದ ಸರ್ವರೂ ಮನ್ನಿಸಲ್ಪಟ್ಟು, ತಮ್ಮ ತಮ್ಮ ಸ್ಥಾನಕ್ಕೆ ತೆರಳಿದರು. ಶಂಕರನಾದರೂ ಪಾರ್ವತಿಯೊಂದಿಗೆ ಕೈಲಾಸಕ್ಕೆ ಬಂದು ಸುಖದಿಂದ ವಾಸಮಾಡಿದನು.

# ತಾರಕಾಸುರನ ಕಥೆ.

ಸಕಲ ದೇವತೆಗಳು ಮನ್ಮಥನು ನಾಶವಾದ ಬಳಿಕ ಭೂಮಿಯಲ್ಲಿ ಸೃಷ್ಟಿಕರ್ಮವೇ ಕೆಟ್ಟದ್ದನ್ನು ಕಂಡು ಶಂಕರನ ಹತ್ತರ ಬಂದು ಪ್ರಾರ್ಥಿಸಲಾಗಿ ಅಂಬಿಕಾಧವನು ಮನ್ಮಥನನ್ನು ಬದುಕಿಸಿದನು. ತಾರಕಾಸುರನೆಂಬ ದೈತ್ಯನು ಉನ್ಮತ್ತನಾಗಿ, ದೇವತಾ ಸ್ತ್ರೀಯರನ್ನು ಎಳೆದುಕೊಂಡು ತನ್ನ ಗೃಹದಲ್ಲಿಡುತ್ತಾ, ಹೋಮಹವನಾದಿಗಳನ್ನು ಕೆಡಿಸುತ್ತಾ, ಜಗತ್ಕಂಟಕನಾಗಲು ದೇವತೆಗಳು ಇವನ ಬಾಧೆಯನ್ನು ತಡೆಯಲಾರದೆ ದಿಕ್ಕುದಿಕ್ಕಿಗೆ ಓಡಿಹೋಗಿ, ಇವನ ವಧೆಯು ಹೇಗಾದೀತು? ಶಂಕರಪುತ್ರನು ಎಂದು ಜನಿಸುವನು? ಎಂದು ಚಿಂತೆಮಾಡತೊಡಗಿದರು. ಬಹಳ ದಿನಗಳು ಹೋದಾಗ್ಯಾದರೂ ಶಂಕರನ ಪಾರ್ವತಿಯರ ಕ್ರೀಡೆಯು ತೀರಲಿಲ್ಲ. ಮತ್ತು ಈಶ್ವರನ ವೀರ್ಯವು ಬೀಳಲಿಲ್ಲ. ಇದನ್ನು ಕಂಡು ಸಕಲ ಸುರರು ಕೈಲಾಸಕ್ಕೆ ಬಂದು ಶಂಕರನ ವೀರ್ಯವು ಶೀಘ್ರವಾಗಿ ಬೀಳಲೆಂಬ ಅಪೇಕ್ಷೆಯಿಂದ ಒಳಗೆ ಅಗ್ನಿಯನ್ನು ಕಳುಹಿದರು. ಅಗ್ನಿಯು ವಟುವೇಷವನ್ನು ಗ್ರಹಿಸಿ, 'ಭಿಕ್ಷಾಂದೇಹಿ' ಎಂದು ನುಡಿಯಲು. ಶಿವನು ಅಗ್ನಿಯ ಹಸ್ತದಲ್ಲಿ ತನ್ನ ವೀರ್ಯಬಿಟ್ಟನು. ಅಗ್ನಿಯು ಅದನ್ನು ಗ್ರಹಿಸಿ ಆಹಾ ಈ ವೀರ್ಯವನ್ನು ಎಲ್ಲಿಬಿಡಲಿ ? ಭೂಮಿಯಲ್ಲಿ ಚೆಲ್ಲಿದರೆ ಪಾತಾಳದವರೆಗೆ ಹೋಗುವದು, ಪರ್ವದಲ್ಲಿ ಚೆಲ್ಲಿದರೆ ಸೀಳಿಹೋಗುವದು. ಇದನ್ನು

ಸಹನಮಾಡುವದು ಯಾರಿಗಾದರೂ ಅಸಾಧ್ಯವೇ ಎಂದು ತಾನೇ ನುಂಗಿಬಿಟ್ಟನು. ಅದರಿಂದ ಅಗ್ನಿಯು ಗರ್ಭವನ್ನು ಧರಿಸಿದನು. ಹೊಟ್ಟೆಯು ಮುಂದಕ್ಕೆ ಬಂದಿತು. ಅದನ್ನು ಕಂಡು ತನ್ನಷ್ಟಕ್ಕೆ ತಾನೇ ನಾಚಿ ಸುರರಿಗೆ ತೋರಿಯನ್ನಾದರೂ ಹೇಗೆ ತೋರಿಸಲೆಂದು ಆಲೋಚಿಸಿ ಅರಣ್ಯ ಪ್ರವೇಶಿಸಿ ನಡೆದನು.

ತಿರುಗುತ್ತ ತಿರುಗುತ್ತ ಒಂದು ಸರೋವರದ ದಡದಲ್ಲಿ ಬರಲು, ಅಲ್ಲಿ ಆರು ಜನ ಋಷಿಪತ್ನಿಯರು ಸ್ನಾನಾರ್ಥವಾಗಿ ಜಲದಲ್ಲಿ ಇಳಿದಿದ್ದರು. ಅದೇ ಕಾಲದಲ್ಲಿ ಅಗ್ನಿಯು ಆ ಜಲದಲ್ಲಿ ಪ್ರವೇಶಿಸಿ ತನ್ನ ಉದರದಲ್ಲಿದ್ದ ಶಿವವೀರ್ಯವನ್ನು ತೆಗೆದು ಆರು ಭಾಗ ಮಾಡಿ ಆ ಸ್ತ್ರೀಯರ ಗರ್ಭದಲ್ಲಿ ಹಾಕಿದನು. ಮುನಿಪತ್ನಿಯರು ಗರ್ಭ ಪ್ರಾಪ್ತಿಯಾದದ್ದನ್ನು ಕಂಡು ಆ ವೀರ್ಯವನ್ನು ತೆಗೆದು ಅಲ್ಲಿಯೇ ಒಂದು ಗದ್ದೆಯಲ್ಲಿ ಚೆಲ್ಲಿ ತಮ್ಮ ಗೃಹಕ್ಕೆ ಹೋದರು. ಅದೇ ವೀರ್ಯವೇ ಕಾರ್ತಿಕ ಮಾಸದಲ್ಲಿ ಕೃತ್ತಿಕಾ ನಕ್ಷತ್ರ ಬಂದ ದಿನದ ಆರು ಮುಖವೂ, ಹನ್ನೆರಡು ಕೈಗಳೂಳ್ಳ ಬಾಲಕನಾಯಿತು. ಕಾರಣ ಇವನಿಗೆ ಕಾರ್ತಿಕೇಯ ಎಂಬ ಹೆಸರು ಬಂದಿತು. ಈ ಬಾಲಕನು ಮಯೂರವಾಹನನಾಗಿ ಭಸ್ಮವನ್ನು ಲೇಪಿಸಿಕೊಂಡು ಅಲ್ಲಿಯೇ ಕುಳಿತಿರಲು ಶಿವನು ಇವನನ್ನು ಕರೆದುಕೊಂಡು ಪಾರ್ವತಿಗೆ ನಿನ್ನ ಮಗನೆಂದು ಹೇಳಿಕೊಡಲಾಗಿ ಅಂಬಿಕೆಯು ಏಳು ವರ್ಷಪರ್ಯಂತರ ಆ ಹುಡುಗನನ್ನು ಪೋಷಣಮಾಡಿದಳು. ನಂತರ ಅಗ್ನಿಯು ಈ ಎಲ್ಲ ವರ್ತಮಾನವನ್ನು ದೇವತೆಗಳಿಗರುಹಲು, ಇಂದ್ರನು ಸಂತುಷ್ಟನಾಗಿ ತಾರಕಾಸುರನಕೂಡ ಕದನಕ್ಕೆ ತೆರಳಿದನು. ಮತ್ತು ಕೈಲಾಸಕ್ಕೆ ಬಂದು ಷಣ್ಮುಖನಿಗೆ ಸೇನಾಧಿಪತ್ಯವನ್ನು ಕೊಟ್ಟನು. ತಾರಕಾಸುರನಿಗೂ ದೇವತೆಗಳಿಗೂ ಭಯಂಕರ ಯುದ್ಧನಡೆದು ದೇವತೆಗಳಿಗೆ ಅಪಜಯವಾಗುವ ಸಂಭವವೊದಗಲು, ಸರ್ವರೂ ಕೂಡಿ ಗುಹನ ಹತ್ತರ ಬಂದು ಪ್ರಾರ್ಥಿಸಲಾಗಿ ಕಾರ್ತಿಕೇಯನು ಸಂತುಷ್ಟನಾಗಿ ಯುದ್ಧಕ್ಕೆ ತೆರಳಿದನು, ದೇವಭಕ್ತರೆಲ್ಲರೂ ಇವನನ್ನು ಹಿಂಬಾಲಿಸಿದರು. ರಕ್ಕಸನಿಗೂ ಷಣ್ಮುಖನಿಗೂ ಭೀಕರ ಕದನವೆಸಗಿತು. ದೈತ್ಯನು ಎಷ್ಟು ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದರೂ ಅವುಗಳನ್ನು ಮಧ್ಯದಲ್ಲಿಯೇ ಖಂಡಿಸಿ, ಗುಹನು ಪುನಃ ದೈತ್ಯನನ್ನು ಪೀಡಿಸಲು, ರಕ್ಕಸನು ಸಿಟ್ಟುಗೊಂಡು ರಥದಿಂದಿಳಿದು ಮಲ್ಲಯುದ್ಧವನ್ನಾರಂಭಿಸಿದನು. ಈರ್ವರಿಗೂ ಏಳುದಿನಗಳವರೆಗೆ ಯುದ್ಧವಾಯಿತು. ನಂತರ ಕಾರ್ತಿಕೇಯನು ಅತಿಕೋಪದಿಂದ ದೈತ್ಯನನ್ನು ಹಿಡಿದು ನೆಲಕ್ಕೆ ಅಪ್ಪಳಿಸಿ ಮುಷ್ಟಿಪ್ರಹಾರದಿಂದ ಅವನ ಪ್ರಾಣವನ್ನೇ ಹೀರಲು ಸಕಲರೂ ಸಂತುಷ್ಟರಾಗಿ ದೇವದುಂದುಭಿಗಳನ್ನು ಬಾರಿಸಿದರು; ಕೆಲವರು ಜಯಜಯಕಾರ ಶಬ್ದಮಾಡಿದರು; ತರುವಾಯ ದೇವೇಂದ್ರನು ಶತ್ರುನಗರವನ್ನು ಲೂಟಮಾಡಿ ಅಲ್ಲಿದ್ದ ಸಕಲ ಧನವನ್ನು ತೆಗೆದುಕೊಂಡು ಬಂಧನದಲ್ಲಿದ್ದವರನ್ನು ಬಿಡಿಸಿ ಸ್ವರ್ಗಕ್ಕೆ ತೆರಳಿದನು. ಇತ್ತ ಷಣ್ಮುಖನು ದೈತ್ಯರು ನಾಶಹೊಂದಿದಮೇಲೆ ವಾರಣಾಸೀ ಕ್ಷೇತ್ರದಲ್ಲಿ ವಾಸಮಾಡಿದನು. ಕೆಲವು ದಿನಗಳ ತರುವಾಯ ಪಾರ್ವ

ತಿಯು ಪುತ್ರಪ್ರೇಮದಿಂದ ಷಣ್ಮುಖನ ಹತ್ತಿರಬಂದು, “ ಮಗನೇ ! ಬ್ರಹ್ಮಚಾರಿಯ ವ್ರತದಿಂದ ಎಷ್ಟುದಿನ ಇರುವಿ ? ಲಗ್ನಮಾಡಿಕೊಂಡು ಗೃಹಸ್ಥಾಶ್ರಮ ಪಡೆ ಎಂದು ಬೋಧಿಸಲಾಗಿ ಗುಹನು, ತಾಯಿ ! ‘ ಹೆಂಗಸಂದರೇನು ? ಅವಳು ಹ್ಯಾಗೆ ಇರುವಳು ? ಇದನ್ನು ತಿಳುಹಿದರೆ ಲಗ್ನಮಾಡಿಕೊಳ್ಳುವೆನ ” ಎನಲು ಭವಾನಿಯು, “ ಮಗನೇ ಹೆಂಗಸರು ನನ್ನ ಹಾಗೆಯೇ ಇರುವರು. ನನ್ನಂಥವಳನ್ನೇ ತಂದು ಲಗ್ನಮಾಡುವೆನು ” ಎನಲಾಗಿ “ ಅಮ್ಮಾ ನಿನ್ನಂಥವರೆಂದಮೇಲೆ ಅವರಾದರೂ ಮಾತೆಯರೇ ಆದರು, ಅಂದಬಳಿಕ ಲಗ್ನಮಾಡಿಕೊಳ್ಳುವದಂತೂ ನಾನು ಒಲ್ಲೆ ” ಎನಲು, ಪಾರ್ವತಿಯು ವಿಶೇಷ ಆಗ್ರಹ ಮಾಡಲಾಗಿ ಕೋಪದಿಂದ ಹೊರಬಿದ್ದು ಇಂದಿನಾರಭ್ಯ ನನ್ನನ್ನು ಯಾವ ಸ್ತ್ರೀಯರು ನೋಡುವರೋ ಅವರು ಏಳುಜನ್ಮ ಪರ್ಯಂತರ ವಿಧವೆಯಾಗಲಿ ಕಾರ್ತೀಕ ಮಾಸದಲ್ಲಿ ಕೃತ್ತಿಕಾ ನಕ್ಷತ್ರ ಬಂದ ದಿವ್ಸ ನನ್ನನ್ನು ಯಾವ ಪುರುಷರು ನೋಡುವರೋ ಅವರಿಗೆ ಏಳು ಜನ್ಮ ಪರ್ಯಂತರ ಸುಖವಾಗಲೆಂದು ನುಡಿದು ಹೊರಟು ಹೋದನು. ನಂತರ ಋಷಿಗಳ ವಿನಂತಿಯಮೇರೆಗೆ ಶಿವಪಾರ್ವತಿಯರ ದರ್ಶನ ತೆಗೆದುಕೊಂಡು ಪುನಃ ತನ್ನ ಪೂರ್ವಸ್ಥಳಕ್ಕೆ ಬಂದನು.

---

## ೧೪ ನೇ ಅಧ್ಯಾಯ ಪ್ರಾರಂಭವು.

## ಪಾರ್ವತಿ ಭಿಲ್ಲಣಿ ಮತ್ತು ಶ್ರೀಯಾಳಸತ್ವ ಪರೀಕ್ಷಾ

## ಈ ಕಥೆಗಳು.

ಒಂದಾನೊಂದು ದಿವಸ ಶಂಕರ-ಪಾರ್ವತಿಯರು, ವಿನೋದದಿಂದ ಕುಳಿತ ಕಾಲದಲ್ಲಿ ಅಂಬಿಕೆಯು ಪ್ರೀತಿಯಿಂದ ಗಣಪತಿಯನ್ನು ತೊಡೆಯಮೇಲೆ ತೆಗೆದುಕೊಂಡು ಮೊಲೆ ಕುಡಿಸುತ್ತಿದ್ದಳು. ಅವಾಗ ಗಣಪತಿಯು ಪ್ರೀತಿಯಿಂದ ತನ್ನ ಸೊಂಡೆಯನ್ನು ತಾಯಿಯ ಮೈಮೇಲೆ ಆಡಿಸುತ್ತ ಅದರಲ್ಲಿ ಹಾಲನ್ನು ತುಂಬಿ ಕೆಳಬದಿಯಲ್ಲಿ ಕುಳಿತಿರುವ ಷಣ್ಮುಖನನ್ನು ಕುರಿತು, ಎಲೋ ದೇವತೆಗಳಿಗೂ ಸಹ ದುರ್ಲಭವಾದ ಅಮೃತವನ್ನು ಪಾನಮಾಡುವೆನು. ನಿನಗೆ ಬೇಕಾದರೆ ತೆಗೆದುಕೋ ಎಂದು ಸೊಂಡಿಲನ್ನು ಮುಂದೆ ಮಾಡಲು ಷಡಾನನು, “ ಅವ್ವಾ, ಈ ಉದ್ದ ಮೂಗಿನವನು, ಹೇಗೆ ಮಾಡುವನು ನೋಡು ! ಇವನ ಸೊಂಡೀ ಹಿಡಿದು ಉರುಳಿಸೇನು !! ಅವ್ವಾ ! ಉದ್ದಮೂಗು, ದೊಡ್ಡ ಕಿವಿ, ಒಂದೇ ಹಲ್ಲು ಇದೆ ಇವನನ್ನು ಹೇಗೆ ಹಡೆದಿ ? ” ಎಂದು ಚೇಷ್ಟೆಮಾಡಲು, ಶಿವ-ಪಾರ್ವತಿಯರು ನಕ್ಕರು. ನಂತರ ಭಾಮಿನಿಯು ಗಣಪತಿಯನ್ನು ಕೆಳಗಿಳಿಸಿ ಷಡಾನನಿಗೆ ಮೊಲೆ

ಕುಡಿಸುತ್ತಿರಲು, ಷಡಾನನು ಒಂದು ಮುಖದಿಂದ ಮೊಲೆಹಾಲು ಕುಡಿಯುತ್ತ ಉಳಿದ ಐದು ಮುಖಗಳನ್ನು ಸುಮ್ಮನೆ ಇರಿಸಿದ್ದನ್ನು ಗಣಪತಿಯು ಕಂಡು, “ ಅವ್ವಾ ಇದನ್ನು ನೋಡೇ ! ಇವನು ಒಂದು ಬಾಯಿಯಿಂದ ಹಾಲು ಕುಡಿಯುವದನ್ನು ಕಂಡು, ಉಳಿದ ಐದು ಬಾಯಿಗಳು ತಮಗಿಲ್ಲವೆಂದು ಅಳುತ್ತಿರುವವು ! ” ಎಂದು ನುಡಿಯಲಾಗಿ ಶಂಕರನು ಇವನೆಷ್ಟು ಜಾಣನಿರುವನೆಂದು ನಕ್ಕನು. ಇದೇ ಪ್ರಕಾರವಾಗಿ ಪ್ರತಿದಿನವಲ್ಲಿ ಗಜಾನನ ಷಡಾನನರೂ ತಮ್ಮ ಲೀಲೆಯಿಂದ ತಂದೆ ತಾಯಿಗಳನ್ನು ಸಂತೋಷಪಡಿಸುತ್ತಿದ್ದರು. ಒಂದು ದಿನ ಭವಾನಿಯು ಶಂಕರನ ಜಡೆಯನ್ನು ನೋಡಿ, ಇಲ್ಲಿ ಸ್ತ್ರೀಮುಖ ಯಾಕೆ ತೋರುವ ಕೇಳಲಾಗಿ ಶಿವನು ಸ್ತ್ರೀಯಲ್ಲಿ ಜಲವಿರುವದೆಂದನು. ಪಾರ್ವತಿಯು ಗಂಗೆಯ ಪ್ರತಿಯೊಂದು ಅವಯವಗಳನ್ನು ಹೇಳಲು, ಶಿವನು ಗಂಗೆಯಲ್ಲ ನೀರೆಂದು ರೆಂದು ಸಾಧಿಸುತ್ತ ನಡೆದನು. ಆ ಕಾಲದಲ್ಲಿ ಶಿವಪಾರ್ವತಿಯರಿಗೆ ವಿನೋದ–ವಾಕ್ಕಲಹಗಳು ಬಹಳೇ ಆದವು. ಕಡೆಗೆ ಈರ್ವರೂ ವಿನೋದದಿಂದ ಪಗಡಿಯನ್ನಾಡಹತ್ತಿದರು.

ಅದೇ ಸಮಯದಲ್ಲಿ ನಾರದನು ಅಲ್ಲಿಗೆ ಬಂದು, ಕೆಲವು ವೇಳೆಯವರೆಗೆ ಆಟವನ್ನು ನೋಡುತ್ತ ಕುಳಿತು ಮಧ್ಯದಲ್ಲಿ ಹೀಗೆ ಆಡುವದರಿಂದ ಪ್ರಯೋಜನವೇನು? ಶರ್ತುಮಾಡಿ ಆಡುವದರಿಂದ ಉಪಯೋಗವೆನಲು ನಾರದನ ಮಾತನ್ನು ನಂಬಿ ಶಿವಪಾರ್ವತಿಯರು ಶರ್ತಿನಿಂದ ಆಟವನ್ನು ಆರಂಭಿಸಿದರು. ಮೊದಲನೇ ಆಟದಲ್ಲಿ ಪಾರ್ವತಿಯು ಗೆದ್ದಳು. ಶಿವನು ವ್ಯಾಘ್ರಾಂಬರವನ್ನು ಕೊಟ್ಟನು. ಇದೇರೀತಿಯಾಗಿ ಪಾರ್ವತಿಯು ಎಲ್ಲ ಆಟವನ್ನು ಗೆಲ್ಲುತ್ತಾ ಶಂಕರನ ಲಂಗೋಟಿ ಮೊದಲು ಮಾಡಿಕೊಂಡು ಎಲ್ಲವನ್ನು ಜಯಿಸಲು ಶಂಕರನು ದಿಗಂಬರನಾಗಿ ನಿಂತನು. ನಾರದನು ಶಂಕರನನ್ನು ಕುರಿತು– ಏನು ನಿನಗೆ ಸಕಲ ದೇವತೆಗಳ ಒಡೆಯನೆಂಬುದು ನಿರರ್ಥಕವಾದಂತಾಯಿತು. ಸ್ತ್ರೀಯು ನಿನ್ನನ್ನು ಗೆದ್ದಮೇಲೆ ನಿನ್ನ ದೊಡ್ಡಸ್ತಿಕೆಯೇನು? ಎಂದು ನಾನಾ ಪರಿಯಿಂದ ಹೀಯಾಳಿಸಲಾಗಿ ಶಂಕರನು ನಾಚಿ ನಾನೇ ಇಲ್ಲಿರುವದಿಲ್ಲವೆಂದು ಅರಣ್ಯಕ್ಕೆ ಗಮನ ಮಾಡಿದನು. ನಂತರ ನಾರದನು ಲೋಕ ಸಂಚಾರಕ್ಕೆ ತೆರಳಿದನು.

ಇತ್ತ ಪಾರ್ವತಿಯು ಶಂಕರನ ವಿರಹದಿಂದ ಸಂತಪ್ತಳಾಗಿ ಜಗದೀಶನನ್ನು ಶೋಧಿಸತೊಡಗಿದಳು. ಅವಳು ಎಷ್ಟು ಹುಡುಕಿದರೂ ದೊರೆಯಲಿಲ್ಲ. ನಂತರ ತಪಸ್ವಿಗಳನ್ನು ಕೇಳಿದರೂ ಅವರಿಂದ ಸಹ ಹೇಳುವದಾಗಲಿಲ್ಲ. ನಂತರ ಅಂಬಿಕೆಯು ಸಕಲ ಭೋಗಗಳನ್ನು ಬಿಟ್ಟು ಶಿವನನ್ನೇ ಆರಾಧಿಸುತ್ತಾ ತಿರುಗುತ್ತಿರಲು ಒಂದು ದಿನ ಹಿಮವತ್ಪರ್ವತದೆಡೆಯಲ್ಲಿ ತಪಸ್ಸಿಗೆ ಕುಳಿತ ಶಂಕರನನ್ನು ಕಂಡು ಸಂತುಷ್ಟಳಾಗಿ, ಹೀಗೆಯೇ ನಾನು ಹೋದರೆ ನನ್ನ ಮೇಲೆ ಕೋಪಿಸುವನು. ಕಾರಣ ಭಿಲ್ಲಣಿ ವೇಷದಿಂದ ಹೋಗಬೇಕೆಂದು ಆಲೋಚಿಸಿ ಮನೋಹರವಾದ ಭಿಲ್ಲಣಿ

ವೇಷವನ್ನು ಧಾರಣಮಾಡಿ ಶಂಕರನೆಡೆಗೆ ಬಂದು ಸುಗಾನ ಮಾಡುತ್ತ ವಿಚಿತ್ರ ನರ್ತನಮಾಡಹತ್ತಿದಳು.

ಇವಳ ಗಾನವನ್ನು ಕೇಳಿ ಗಂಧರ್ವರು ತಟಸ್ಥರಾದರು; ಪಶು-ಪಕ್ಷ್ಯಾದಿಗಳು ವೈರಭಾವಬಿಟ್ಟು ಸುಮ್ಮನೆ ಕುಳಿತವು; ಶೇಷನು ಭೂಮಿಯನ್ನು ಸೀಳಿ ಮೇಲೆ ಬರಹತ್ತಿದನು; ಶಂಕರನು ಜಪ-ತಪವನ್ನು ಬಿಟ್ಟು ಇವಳ ಗಾನಕ್ಕೆ ಹಾವಭಾವಕ್ಕೆ ಸುಂದರವಾದ ರೂಪಕ್ಕೆ- ಮರುಳಾಗಿ ಭ್ರಾಂತನಾದನು. ಶಂಕರನು ಭಿಲ್ಲಣಿಯ ಹತ್ತರ, ಬಂದು "ಸುಂದರೀ ನೀನ್ಯಾರು? ನಿನ್ನ ಸ್ಥಳವಾವುದು? ನಿನ್ನ ಹೆಸರೇನು? ದಯಮಾಡಿ ನನ್ನನ್ನು ಹೊಂದಬಾರದೇ? ನಿನ್ನ ರೂಪಕ್ಕೆ ಹುಚ್ಚನೇ ಆಗಿರುವೆನು. ಪಂಚಶರನ ವ್ಯಥೆಯಂತೂ ಹೇಳಲಸದಳವಾಗಿರುವದು. ದಯಮಾಡಿ ನನ್ನನ್ನು ಕೂಡಿದರೆ, ನೀನು ಹೇಳಿದಂತೆ ಕೇಳುವೆನು. ದಯವಿಟ್ಟು ಕರುಣಿಸು" ಎಂದು ಪ್ರಾರ್ಥಿಸಲಾಗಿ 'ಏನು ನಿನಗೆ ಎಚ್ಚರಿಕೆಯಿಲ್ಲದಂತೆ ತೋರುವದು. ಸಾಕ್ಷಾತ್ ಪಾರ್ವತಿಯನ್ನು ಬಿಟ್ಟು ಇಲ್ಲಿಗೆ ಬಂದು ಯಾಕೆ ಚಡಪಡಿಸುತ್ತಿ? ಪರಸ್ತ್ರೀಯರಮೇಲೆ ಆಶೆ ಏಕೆ? ಚಿತ್ತಸ್ವಾಧೀನವಿಲ್ಲದ ನಿನಗೆ ತಪಸ್ವಿ ಹೇಗೆ ಅನ್ನಬೇಕು? ಹಿಂದಕ್ಕೆ ಸರಿ" ಎನ್ನಲಾ ಶಂಕರನು, "ಸುದತಿಯೇ ಪಾರ್ವತಿಯ ಸಂಗಡ ಜಗಳಾಡಿ ಬಂದಿರುವೆನು. ಅವಳ ಮುಖವನ್ನು ಸಹ ನೋಡುವದಿಲ್ಲ.! ಅವಳ ದರ್ಶನವು ಸ್ವಪ್ನದಲ್ಲಿ ಕೂಡ ನನಗೆ ಬೇಡ" ಎನ್ನಲು ಭಿಲ್ಲಣಿಯು- "ನನ್ನನ್ನು ಅಪೇಕ್ಷಿಸಬೇಡ. ಯಾಕಂದರೆ, ನನ್ನ ಪತಿಯು ಮಹಾ ಕೋಪಿಷ್ಟನಿರುವನು. ನಿನ್ನ ನುಡಿಯನ್ನು ಕೇಳಿದರೆ ಏನಾದರೂ ಮಾಡ್ಯಾನು! ಅಲ್ಲದೆ ಪರಸ್ತ್ರೀಯನ್ನು ಅಪೇಕ್ಷಿಸುವದು ನಿನ್ನ ಧರ್ಮವಲ್ಲ ನಡೆ! ಕೈಲಾಸಕ್ಕೆ ಹೋಗಿ ಪಾರ್ವತಿಯೊಂದಿಗೆ ಸುಖದಿಂದಿರು," ಎನಲು ಶಂಕರನು, "ಒಲ್ಲೊಲ್ಲೆ! ಆ ಪಾರ್ವತಿಯ ಸಂಗವನ್ನು ಒಲ್ಲೆ!! ಅವಳು ಮಹಾ ಕಪಟಳು. ಯಾವಕಾಲದಲ್ಲಿ ಏನು ಮಾಡುತ್ತಾಳೋ ತಿಳಿಯದು." ಎನಲು, ಭಿಲ್ಲಣಿಯು, "ಸಾಕು, ಸಾಕು! ಯಾಕೆ ಮಾತನಾಡುವಿ? ನೀನೇ ಮಹಾ-ಕಪಟನು, ಪಾರ್ವತಿಯು ಬಹಳೇ ಸಜ್ಜನಳು! ನಿನ್ನದೆಲ್ಲವೂ ಗೊತ್ತಿರುವದು. ಪಾರ್ವತಿಯ ಸಂಗಡ ಜೂಜನ್ನಾಡಿ ಸುಮ್ಮನೆ ಸೆಟಗೊಂಡು ಬರಲಿಕ್ಕೆ ನಾಚಿಕೆ ಬರುವದಿಲ್ಲವೇ?" ಎಂದು ಅವಳು ಮರ್ಮಭೇದಕ-ನುಡಿಗಳನ್ನಾಡಲು ಶಂಕರನು ಸುಮ್ಮನಾದನು. ಪುನಃ ಭಿಲ್ಲಣಿಯು ನೃತ್ಯಗಾನವನ್ನಾರಂಭಿಸಿದಳು. ಶಿವನು ಅದನ್ನು ಕಂಡು ಸ್ಮೃತಿಯಿಲ್ಲದೆ ಭಿಲ್ಲಣಿಯನ್ನು ಆಲಂಗಿಸಲಿಕ್ಕೆ ಓಡುತ್ತಾ ಬರಲು, ಭಿಲ್ಲಣಿಯು ಮುಂದಕ್ಕೆ ಸಾಗಿದಳು. ಶಂಕರನು ಬೆನ್ನಟ್ಟಿ, "ಸುಂದರೀ! ಸ್ವಲ್ಪ ನಿಲ್ಲು!! ನಿನ್ನ ಮುಖವನ್ನಾದರೂ ನೋಡಿ ಸಂತೋಷ ಪಡುವೆನು. ದಯಮಾಡಿ ನನ್ನನ್ನು ಅನಾದರಿಸಬೇಡ. ನೀನು ಹೇಳಿದಂತೆ ಕೇಳುವೆನು. ಒಂದಾವರ್ತಿಯಾದರೂ ನನ್ನನ್ನು ನೋಡು," ಎಂದು ಅನೇಕ ವಿಧದಿಂದ ನುಡಿಯಲಾರಂಭಿಸಲು, ಭಿಲ್ಲಣಿಯು ಹಿಂದಕ್ಕೆ ತಿರುಗಿ, "ಒಳ್ಳೇದು! ನಿನ್ನ ಮಾತಿನಂತೆ ಅನುಸರಿಸುವೆನು. ನನ್ನ ಮನೆಗೆ ಬಾ! ಅಲ್ಲಿಯೇ

ಮಾಲೆಯನ್ನು ಹಾಕುವೆನು" ಎಂದು ಹೇಳಿ ಕೈಲಾಸಕ್ಕೆ ಕರೆದುಕೊಂಡು ಬಂದು ಸಿಂಹಾಸನದಮೇಲೆ ಶಂಕರನನ್ನು ಕುಳ್ಳಿರಿಸಿ, ಷೋಡಶೋಪಚಾರದಿಂದ ಪೂಜೆ ಮಾಡಿ ಕೊರಳಲ್ಲಿ ಮಾಲೆಹಾಕಿ, ಭಿಲ್ಲಣಿಯು ಅಂಬಿಕೆಯ ರೂಪವನ್ನು ಹೊಂದಲು ಶಂಕರನು ಉಮೆಯನ್ನು ಕಂಡು ಆಶ್ಚರ್ಯಭರಿತನಾಗಿ ಇವಳ ಕೃತ್ಯವನ್ನು ಸ್ತೋತ್ರ ಮಾಡಿ ಪಾರ್ವತಿಯನ್ನು ಆಲಿಂಗಿಸಿ ಸಂತೋಷದಿಂದ ವಾಸಮಾಡಿದನು.



# ಶ್ರೀಯಾಳ ಸತ್ವಪರೀಕ್ಷೆ.

ಒಂದು ದಿವಸ ಸುರಮುನಿಯಾದ ನಾರದನು ಲೋಕಗಳನ್ನು ಸಂಚಾರ ಮಾಡುತ್ತ ಮಾಡುತ್ತ ಕೈಲಾಸಕ್ಕೆ ಬಂದು ಶಂಕರನಿಗೆ ನಮಸ್ಕರಿಸಿ, ಸುಮ್ಮನೆ ಕೂಡಲು, ಪಾರ್ವತೀಧವನು ಲೋಕದಲ್ಲಿ ನಡೆದ ಚಮತ್ಕಾರವನ್ನು ತಿಳುಹೆಂದು ಕೇಳಲಾಗಿ ನಾರದನು, " ದೇವನೆ ! ಹೇಳುವದೇನು ? ಭೂಲೋಕದಲ್ಲಿ ಕಾಂತಿ ಪುತಿ ಪಟ್ಟಣದಲ್ಲಿ ಶ್ರೀಯಾಳನೆಂಬ ರಾಜನು ರಾಜ್ಯಭಾರವನ್ನು ಮಾಡುತ್ತಿರುವನು. ದೇವಾ ! ಆ ಭೂಪತಿಯು ಸದ್ಗುಣಗಳನ್ನು ಎಷ್ಟೆಂದು ವರ್ಣಿಸಲಿ ! ಅವನ ಸತ್ಕೀರ್ತಿಯೆಂಬ ಚಂದ್ರನು ಜಗತ್ತನ್ನು ಬೆಳಗಿಸುತ್ತಿರಲು ನಿನ್ನಿಂದ ಉತ್ಪನ್ನರಾದ ಚಂದ್ರ ಸೂರ್ಯರು ನಾಚಿ ತಲೆಬೊಗ್ಗಿಸಿರುವರು. ಪ್ರತಿನಿತ್ಯ ಅವನು ಬಂದ ಯಾಚಕರನ್ನು ತೃಪ್ತಿಮಾಡದೆ ಭೋಜನವನ್ನೇ ಮಾಡುವದಿಲ್ಲ. ಪ್ರತಿಸೋಮವಾರ ಪ್ರದೋಷಕಾಲದಲ್ಲಿ ಲಿಂಗಾರ್ಚನೆ ಮಾಡದವಿನಹ ಬಾಯಲ್ಲಿ ನೀರನ್ನು ಸಹ ಹಾಕುವದಿಲ್ಲ. ಇಲ್ಲದೆ ಅವನ ರಾಜ್ಯದೊಳಗೆ ಎತ್ತನೋಡಿದರೂ ಶಿವನಾಮ ಗರ್ಜನೆಯೂ, ರುದ್ರಘೋಷವೂ ಕೇಳುವದಲ್ಲದೆ ಎರಡನೇ ಶಬ್ದವೇ ಇಲ್ಲ. ಇದಂತು ಇರಲಿ, ಅವನ ಪತ್ನಿಯಾದ ಚಾಂಗುಣಿಯ ಪಾತಿವ್ರತ್ಯ ಪ್ರಭಾವವನ್ನು ವರ್ಣಿಸುವದಂತೂ ಆದಿಶೇಷನಿಗೂ ಆಗದು. ಪುತ್ರನಾದ ಚಿಲ್ಲಾಳನಾದರೂ ಅಂಥವನೇ ಇರುವನು. ಆ ನೃಪೋತ್ತಮನ ಸಮಾನ ಯಾರೂ ಇಲ್ಲ" ಎನ್ನಲು ಶಂಕರನು ಅವನ ಕೃತ್ಯಕ್ಕೆ ಮೆಚ್ಚಿ, " ಒಳ್ಳೇದು ! ನಾನೇ ಅವನನ್ನು ಪರೀಕ್ಷಿಸುವೆನು " ಎಂದು ಹೇಳಿದನು.

ತರುವಾಯ ಶಂಕರನು ವೃದ್ಧಬ್ರಾಹ್ಮಣವೇಷವನ್ನು ತೆಗೆದುಕೊಂಡು ಶರೀರದಲ್ಲೆಲ್ಲಾ ವ್ರಣವನ್ನು ಮಾಡಿಕೊಂಡು ಸಾಯುವ ಮನುಷ್ಯನಂತಾಗಿ ' ರಾಜಾ ! ಬಹು ಹಸಿದಿರುವೆ ! " ಎಂದು ಒದರುತ್ತಾ, ಶ್ರೀಯಾಳನ ಸಮೀಪಕ್ಕೆ ಬರಲು, ರಾಜನು ಬ್ರಾಹ್ಮಣನಿಗೆ ವಿಶೇಷ ಸನ್ಮಾನ ಮಾಡಿ ಸಿಂಹಾಸನದಮೇಲೆ ಕುಳ್ಳಿರಿಸಿ ಗಾಳಿಯನ್ನು ಹಾಕುತ್ತಾ, ಬಂದಕಾರ್ಯವನ್ನು ವಿಚಾರಿಸಲು, ಬ್ರಾಹ್ಮಣನು ಧ್ವನಿ

ಯನ್ನು ನಡಗಿಸುತ್ತಾ, “ ರಾಜಾ ! ನೀನು ಇಚ್ಛಾ ಭೋಜನ ಮಾಡುಸುವಿ ಯೆಂಬ ಖ್ಯಾತಿಯನ್ನು ಕೇಳಿಬಂದಿರುವೆನು. ನನಗೆ ನರಮಾಂಸವನ್ನು ತಿನ್ನುವ ಲವಲವಿಕೆಯಾಗಿರುವದು. ಕಾರಣ ಮಾಂಸವನ್ನು ಕೊಟ್ಟರೆ ಬದುಕುವೆನು. ಇಲ್ಲ ದಿದ್ದರೆ ಶಾಪಕೊಟ್ಟು ಹೊರಟು ಹೋಗುವೆನು ” ಎನ್ನಲು ಶ್ರೀಯಾಳನು ಒಳ್ಳೇ ದೆಂದು ಅಪರಾಧಿಗಳನ್ನು ಹಿಡಿದುಕೊಂಡು ಬರಲಿಕ್ಕೆ ಚಾರರಿಗೆ ಅಜ್ಞಾಪಿಸಲು ಬ್ರಾಹ್ಮಣನು ಸಿಟ್ಟಿನಿಂದ, “ ರಾಜಾ ! ನನಗೆ ಅಪರಾಧಿಗಳ ಮಾಂಸವನ್ನು ಕೊಡುವಿಯಾ ? ಎಲಾ ಅಪರಾಧಿಗಳ ಮಾಂಸವು ನನಗೆ ಸಿಕ್ಕೇ ಸಿಗುವದು. ನಿನ್ನ ಹತ್ತರ ಯಾಕೆ ಬರಬೇಕು, ? ಒಲ್ಲೆ ಒಲ್ಲೆ ನಿನ್ನ ದಾನವನ್ನು ಒಲ್ಲೆನೆನಲು ಚಾಂಗು ಣೆಯು ಮುಂದಕ್ಕೆ ಬಂದು, ಸ್ವಾಮಿನ್ ! ಕೋಪತೆಗೆದುಕೊಳ್ಳಲಾಗದು ! ನನ್ನ ಮಾಂಸವನ್ನು ಕೊಡುವೆನು !! ಸ್ವೀಕರಿಸಬಹುದೆನಲು ವಿಪ್ರನು, “ ಅವ್ವಾ ! ಸ್ತ್ರೀಯರ ಮಾಂಸವನ್ನು ನಾವು ತಿನ್ನುವದಿಲ್ಲ ” ಎನಲು ರಾಜನು ಮುಂದಕ್ಕೆ ಬಂದು, “ ವಿಪ್ರಶ್ರೇಷ್ಠನೇ ! ನನ್ನ ಮಾಂಸವನ್ನು ತೆಗೆದುಕೊಂಡು ಅನುಗ್ರಹ ಮಾಡಬೇಕು. ” ಎಂದು ಬೆಸಗೊಳ್ಳಲಾಗಿ ವೃದ್ಧನು, ಅಯ್ಯೋ ! ರಾಜಾ ! ಎಂಥ ಮಾತನಾಡಿದಿ ? ನಿನ್ನಿಂದ ಜಗತ್ತೇ ಸಂರಕ್ಷಿತವಾಗುವದು. ಅಂಥ ಪುಣ್ಯಾತ್ಮ ನಾದ ನಿನ್ನನ್ನೇ ಕೊಂದಬಳಿಕ ಎಲ್ಲರೂ ನನ್ನನ್ನು ನಿಂದೆ ಮಾಡಲಿಕ್ಕಿಲ್ಲವೇ ? ಬೇಡಪ್ಪಾ ! ಬೇಡ ನಿನ್ನ ಮಾಂಸವು ನನಗೆ ಬೇಡವೆನಲಾಗಿ ರಾಜನು ಖಿನ್ನನಾಗಿ ಅಹಾ ! ಈ ಮುನಿಗೆ ಯಾವ ಮಾಂಸವು ಬೇಕಾಗಿರಬಹುದು. ! ಯಾರು ಕೇಳಿ ದರೂ ನೀವು ಬೆಡೆನ್ನುವನಲ್ಲ ! ಎಂದು ಆಲೋಚಿಸಿ, ಕರಮುಗಿದು, “ ಸ್ವಾಮಿನ್ ! ತಮ್ಮ ಮನೋಭಿಪ್ರಾಯ ನನಗಂತೂ ತಿಳಿಯುಲೊಲ್ಲದು, ಕಾರಣ ತಾವೇ ದಯ ಮಾಡಿ ಹೇಳಿದರೆ ಅದರಂತೆ ನಡೆಯುವೆನು ” ಎಂದು ಬಿನ್ನೈಸಲು, ಬ್ರಾಹ್ಮಣನು, “ ರಾಜನೇ ! ನಾನು ಹೇಳಿದರೆ ನೀನು ಕೊಡುವದಿಲ್ಲವೆಂದರೆ ಏನುಮಾಡುವದು, ? ಕಾರಣ ವಚನವನ್ನು ಕೊಡು, ಅಂದರೆ ಹೇಳುವೆನು ” ಎನ್ನಲಾಗಿ ಶ್ರೀಯಾಳನು ಶ್ರೀ ಶಂಕರನ ಶಪಥ ಪೂರ್ವಕವಾಗಿ ನೀವು ಬೇಡಿದ ಪದಾರ್ಥಗಳನ್ನು ಕೊಡು ವೆನೆಂದು ಭಾಷೆಯನ್ನು ಕೊಡಲು ವಿಪ್ರನು, ರಾಜನೇ ! ನಿನ್ನ ಮಗನಾದ ಶ್ರೀಯಾ ಳನ ಮಾಂಸವನ್ನು ಕೊಡೆಂದು ಕೇಳಲಾಗಿ ರಾಜನು ಸಿಡಿಲು ಬಡೆದ ಮರದಂತೆ ನೆಲಕ್ಕೆ ಉರುಳಿದನು.

ವಿಪ್ರನು ಅತಿಕೋಪಯುಕ್ತನಾಗಿ, “ ರಾಜನೇ ! ನಿನ್ನ ಕಡೆಯಿಂದ ಕೊಡು ವದಾಗುವದಿಲ್ಲ ಬಿಡು. ವಚನ ಭ್ರಷ್ಟನೆಂದು ಒದರುತ್ತಾ ಹೋಗುವೆನು ” ಎಂದು ನುಡಿಯಲು, ರಾಜನು ಚೇತರಿಸಿ ಎದ್ದು ಬ್ರಾಹ್ಮಣನನ್ನು ಸಂತೈಸಿ, ಹಸುಳನಾದ ಚಿಲ್ಲಾಳನನ್ನು ಕರೆದುಕೊಂಡು ಬಂದು ತಮ್ಮ ಹಸ್ತದಲ್ಲಿ ಕೊಡುವೆನು ತೆಗೆದುಕೊ ಳ್ಳಬಹುದೆಂದು ನುಡಿಯಲು ಬ್ರಾಹ್ಮಣನು ಸಿಟ್ಟಿನಿಂದ, “ ಎಲಾ ! ನಾನು ಹುಲಿ ಯೋ ! ಕರಡಿಯೋ !! ನಿನ್ನ ಮಗನನ್ನು ತೆಗೆದುಕೊಂಡು ನಾನೇನು ಮಾಡಲಿ, ? ನಿನ್ನ ಹೆಂಡತಿಯು ತನ್ನ ಹಸ್ತದಿಂದಲೇ ಆ ಹಸುಳನನ್ನು ಸಂಹರಿಸಿ ಮಾಂಸವನ್ನು

ಪಕ್ವಮಾಡಿ ನನಗೆ ಕೊಡಬೇಕು. ಅಂದರೆ ನಾನು ಸ್ವೀಕರಿಸುವೆನು. ಮತ್ತು ಮಗನ ಕುತ್ತಿಗೆ ಕೊಯ್ಯುವ ಕಾಲದಲ್ಲಿ ಸ್ವಲ್ಪಾದರೂ ರೋದನ ಮಾಡಿದರೆ ನಿಮಗೆ ಶಾಪಕೊಟ್ಟು ಹೀಗೆಯೇ ಹೋಗುವೆನು ಎಂದು ಗದ್ದರಿಸಲು, ರಾಜನೂ ರಾಣಿಯೂ ಉಪಾಯರಹಿತರಾಗಿ, ತಥಾಸ್ತು ' ಎಂದರು. ನಂತರ ಚಾಂಗುಣಿಯು ಹೊರಭಾಗದಲ್ಲಿ ಆಡುತ್ತಿದ್ದ ಚಿಲ್ಲಾಳನನ್ನು ಗದ್ಗದಿತ ಕಂಠವುಳ್ಳವಳಾಗಿ ಬಾರಪ್ಪಾ ಚಿಲ್ಲಾಳೆಯೆಂದು ಕೂಗಲು ಕೂಡಲೇ ಹಸುಳನು ಓಡುತ್ತ ಬಂದು ಎಲ್ಲರಿಗೂ ನಮಸ್ಕರಿಸಿ, ಅವ್ವಾ ಯಾಕೆ ಕರೆದಿಯೆಂದು ಕೇಳಲು, ಚಾಂಗುಣಿಯು ನಡೆದ ವೃತ್ತಾಂತವನ್ನು ತಿಳುಹಿದಳು. ಇದನ್ನು ಕೇಳಿ ಬಾಲಕನು ಸಂತೋಷಭರಿತನಾಗಿ, “ ಮಾತೆ ! ಈ ಕೆಲಸಕ್ಕೆ ಸ್ವಲ್ಪಾದರೂ ಚಿಂತಿಸಬೇಡ. ಮಹಾ ಅಶುಚಿಯಾದ ಈ ದೇಹವನ್ನು ಯತಿರಾಯನಿಗೆ ಅರ್ಪಿಸಿದರೆ ನನ್ನ ಸಮಾನ ಪುಣ್ಯವಾನರು ಯಾರೂ ಇಲ್ಲ, ಕಾರಣ ಜಾಗ್ರತೆಯಿಂದ ಕಾರ್ಯಮಾಡು ” ಎನಲಾಗಿ ಹುಡುಗನ ವಾಕ್ಯವನ್ನು ಕೇಳಿ ಎಲ್ಲರಿಗೂ ಹೆಚ್ಚಿಗೆ ದುಃಖವಾಯಿತು

ನಂತರ ಚಾಂಗುಣಿಯು ಬಾಲಕನನ್ನು ಕರೆದುಕೊಂಡು ಅಡಿಗೆಯ ಮನೆಯನ್ನು ಪ್ರವೇಶಿಸಿ ತೊಡೆಯ ಮೇಲೆ ಕಂದನನ್ನು ಮಲಗಿಸಿ, ಕೈಯಲ್ಲಿ ಶಸ್ತ್ರವಂ ಹಿಡಿದು ಕಣ್ಣುತುಂಬಾ ನೀರು ತಂದು ಶೋಕ ಮಾಡಹತ್ತಿದಳು. ತಾಯಿಗೆ ಚಿಲ್ಲಾಳನು ಅನೇಕವಿಧ ನೀತಿಯನ್ನು ಹೇಳಿದನು. ಆವಾಗ ವಜ್ರಕ್ಕಿಂತಲೂ ಕಠಿಣ ಹೃದಯವುಳ್ಳವಳಾಗಿ ಶಂಕರನಂ ಧ್ಯಾನಿಸುತ್ತ ಬಾಲಕನ ಶಿರವನ್ನು ಕೊರೆದು ಮಗನ ಮೋಹದಿಂದ ಶಿರವನ್ನು ಒತ್ತಟ್ಟಿಗೆ ಬಚ್ಚಿಟ್ಟು ಉಳಿದ ಅಂಗಗಳ ಪಾಕವನ್ನು ಮಾಡಿ, ಯತಿಯಹತ್ತರ ಬಂದು ಮಾಂಸವನ್ನಿಡಲು, ಸರ್ವಜ್ಞನಾದ ವಿಪ್ರನು ಅದನ್ನು ನೋಡಿ, ಅಯ್ಯೋ ಮುಗ್ಧೇ “ ಸರ್ವೇಷು ಗಾತ್ರೇಷು ಶಿರಃ ಪ್ರಧಾನಂ ” ಎಂಬ ನೇಮವಿರುತ್ತಿರಲಿಕ್ಕೆ ಶಿರವನ್ನು ತೆಗೆದಿಟ್ಟು ಮಾಂಸವನ್ನು ತಂದಿರುವಿಯಾ ! ಒಲ್ಲೆ ಒಲ್ಲೆ ನಿನ್ನ ದಾನವನ್ನು ಒಲ್ಲೆ! ನಾನೇ ಹೋಗುವೆನು,” ಎಂದು ಮೇಲಕ್ಕೆ ಏಳಲು, ರಾಜನೂ ಚಾಂಗುಣಿಯೂ ಮುನಿಯ ಪಾದಗಳನ್ನು ಹಿಡಿದು, “ ನಮ್ಮಿಂದ ಅಪರಾಧವಾಗಿರುವದು ಕ್ಷಮಿಸಬೇಕು ” ಎಂದು ಬೇಸಗೊಳ್ಳಲು ವಿಪ್ರನು ಹಾಗಾದರೆ ಆ ರುಂಡವನ್ನು ನನ್ನ ಸಮಕ್ಷಮವಾಗಿ ಜೋಗುಳವನ್ನು ಹಾಡುತ್ತ ಕುಟ್ಟಿ, ನನಗೆ ಹಾಕಬೇಕೆಂದು ಹೇಳಲು ಚಾಂಗುಣಿಯು ಒಳ್ಳೇದೆಂದು ಆ ರುಂಡವನ್ನು ತೆಗೆದುಕೊಂಡು ಬಂದು, ವಿಪ್ರನ ಸಮಕ್ಷಮವಾಗಿ ಒರಳಲ್ಲಿ ಹಾಕಿ ಜೋಗುಳವನ್ನು ಹಾಡುತ್ತಾ ಕುಟ್ಟಲಾರಂಭಿಸಿದಳು. ಮತ್ತು ಹೇ ಬಾಲಾ ! ಚಿಲ್ಲಾಳ ! ನಿರ್ಭಾಗ್ಯಳಾದ ನನ್ನನ್ನು ಬಿಟ್ಟು ನೀನೊರ್ವನೇ ಕೈಲಾಸಕ್ಕೆ ತೆರಳಿದಿಯಾ ! !. ಕಂದಾ ! ನಿನ್ನ ಮುಖವನ್ನು ಹೇಗೆ ನೋಡೇನು !! ಜನರಲ್ಲಿ ಮೋರೆಯನ್ನಾದರೂ ಹೇಗೆ ತೋರಿಸಲಿ, !!! ಇಷ್ಟು ದಿವಸಗಳವರೆಗೂ ನನ್ನಿಂದ ಪೋಷಿತನಾಗಿ ಅಂತ್ಯದಲ್ಲಿ, ಈ ಕಠೋರ ಹಸ್ತದಿಂದಲೇ ಮೃತಪಟ್ಟೆಯಾ ! ಮುಂತಾಗಿ ಅರ್ಥಗರ್ಭಿತ ಗೀತೆಯನ್ನು ಹಾಡುತ್ತ ಶಿರವನ್ನು ಚೂರುಮಾಡಿ ಯತಿರಾಯನಿಗೆ ಉಣಬಡಿಸಲು, ವಿಪ್ರನು ಸ್ವಲ್ಪಹೊತ್ತು ವಿಚಾ

ರಿಸಿ, “ರಾಜನೇ! ನೀವೀರ್ವರು ಅನ್ನದಾತೃಗಳು! ನಿಮ್ಮನ್ನು ಬಿಟ್ಟು ನಾನೆಂತು ಭೋಜನಕ್ಕೆ ಕೂಡಲಿ,? ಕಾರಣ ನೀವೀರ್ವರೂ ನನ್ನ ಸಂಗಡ ಉಣಲಿಕ್ಕೆ ಕುಳಿತರೆ ನಾನು ಕೂಡುವೆನು. ಇಲ್ಲದಿದ್ದರೆ ಹೀಗೆಯೇ ಹೋಗುವೆನು!! ಎಂದು ನುಡಿಯಲು ರಾಜನು ಚಿಂತಾತುರನಾಗಿ ಸುಮ್ಮನೆ ಕುಳಿತನು. ಚಾಂಗುಣಿಯು ಪತಿಯ ಹತ್ತರ ಬಂದು, ವಲ್ಲಭನೇ! ಯಾಕೆ ಚಿಂತಿಸುವಿ? ನಮ್ಮುದರದಿಂದ ಜನಿಸಿದ ಬಾಲಕನನ್ನು ನಮ್ಮ ಹೊಟ್ಟೆಯಲ್ಲಿ ಹಾಕಿಕೊಳ್ಳುವದಕ್ಕೆ ದುಃಖವೇಕೆ? ಇಷ್ಟು ಕೆಲಸಕ್ಕೆ ಸತ್ವಹರಣ ಮಾಡಿಕೊಳ್ಳುವದು ಯೋಗ್ಯವಾಗದು!! ಎನಲು ರಾಜನು ಸಮ್ಮತಿಸಿ ಇಬ್ಬರೂ ಭೋಜನಕ್ಕೆ ಕುಳಿತರು.

ಆನಂತರ ವಿಪ್ರನು ಕೆಲವು ಹೊತ್ತು ವಿಚಾರಿಸಿ, ಅಯ್ಯೋ ಪುತ್ರರಹಿತರಾದ ಪಾಪಿಗಳ ಮನೆಯಲ್ಲಿ ಉಣ್ಣುವ ಬಗೆಯಾದರೂ ಹೇಗೆ? ದೀಪವಿಲ್ಲದ ಮನೆಯಂತೆಯೂ, ಚಂದ್ರನಿಲ್ಲದ ಆಕಾಶದಂತೆಯೂ, ಕಮಲಗಳಿಲ್ಲದ ಸರೋವರದಂತೆಯೂ ಅಶುಭವಾದ ನಿನ್ನ ಮನೆಯಲ್ಲಿ ನಾನು ಭೋಜನ ಮಾಡಲಾರೆ ಎನಲು ಚಾಂಗುಣಿಯು ನೆಲಕ್ಕೆ ಬಿದ್ದು, ಆಹಾ! ಪುತ್ರನು ಹೋದನು. ಸತ್ಯವೂ ಹೋಯಿತು. ಇನ್ನೇನುಗತಿ! ಹಾ ಶಂಕರಾ! ವಿಶ್ವಂಭರಾ!! ಮದನ ಸಂಹರಾ. ನೀನೇ ರಕ್ಷಿಸಬೇಕಲ್ಲದೆ ನಿನ್ನ ಹೊರ್ತು ನಮಗೆ ಯಾರೂ ಗತಿಯಿಲ್ಲ!!! ದಯಮಾಡಿ ನಮ್ಮನ್ನು ರಕ್ಷಿಸು ಎಂದು ರೋದನ ಮಾಡುತ್ತಿರಲು ಶ್ರೀಯಾಳನು, ಹೆಂಡತಿಯನ್ನು ಸಮಾಧಾನಮಾಡಿ ಈರ್ವರೂ ಮುನಿಯ ಪಾದಗಳಿಗೆ ನಮಸ್ಕರಿಸಿ, “ದೇವಾ! ಇರುವ ಓರ್ವಕುವರನನ್ನು ನಿಮ್ಮ ಸಮಕ್ಷಮವಾಗಿಯೇ ಸಂಹರಿಸಿದೆವು! ಇನ್ನೆಲ್ಲಿ ಪುತ್ರನು ಬರುವನು! ದಯಮಾಡಿ ಭೋಜನಮಾಡಿ ನಮ್ಮನ್ನು ಉದ್ಧರಿಸಬೇಕೆಂದು ಬೇಡಿಕೊಳ್ಳಲು, ವಿಪ್ರನು ಸಂತುಷ್ಟನಾಗಿ, “ಚಾಂಗುಣೀ ಚಿಂತೆಯನ್ನು ಮಾಡಬೇಡ ನಿನ್ನ ಮಗನನ್ನು ಕರೆ, ಈಗ ಬರುವನು” ಎನ್ನಲು ಚಾಂಗುಣಿಯು ವಿಪ್ರನ ವಚನದ ಮೇರೆಗೆ, “ಬಾರಪ್ಪಾ ಚಿಲ್ಲಾಳ” ಎಂದು ಕರೆದ ಕೂಡಲೆ ಬಾಲಕನು ಹೊರಗಿಂದ ಓಡುತ್ತಾ ಬಂದು, ‘ಅವ್ವಾ ಮತ್ತೇಕೆ ಕರೆದಿ? ಎಂದು ಕೇಳಿದನು. ಅಷ್ಟರಲ್ಲಿ ವಿಪ್ರನು ಅದೃಶ್ಯನಾಗಿ, ಶಂಕರನ ನಿಜರೂಪದಿಂದ ಪ್ರಕಟನಾಗಿ ಬಾಲಕನನ್ನು ಅಪ್ಪಿಕೊಂಡನು. ಚಾಂಗುಣಿಯೂ ಶ್ರೀಯಾಳನೂ ಮಹೇಶನನ್ನು ಕಂಡು ನಮಸ್ಕರಿಸಿದರು. ನಂತರ ಪಾರ್ವತೀಧವನು ಚಿಲ್ಲಾಳನಿಗೆ ಪಟ್ಟಾಭಿಷೇಕ ಮಾಡಿ, ಶ್ರೀಯಾಳನನ್ನೂ ಚಾಂಗುಣಿಯನ್ನೂ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ತೆರಳಿದನು, ಆ ಕಾಲದಲ್ಲಿ ಕಾಂತಿಮತಿ ಪಟ್ಟಣದಲ್ಲಿ ಮಹೋತ್ಸವವಾದದ್ದನ್ನು ವರ್ಣಿಸಲದಳವಾಗಿರುವದು, ಅಸ್ತು; ಈ ಶಿವಲೀಲಾಮೃತವನ್ನು ಯಾವ ಮನುಷ್ಯನು ಓದುವನೋ ಯಾವನು ಕೇಳುವನೋ ಅವನು ಈ ಲೋಕದಲ್ಲಿ ಸಕಲ ಭೋಗಗಳನ್ನು ಅನುಭೋಗಿಸಿ ನಂತರದಲ್ಲಿ ಶಿವಸಾಯುಜ್ಯವನ್ನು ಪಡೆಯುವನು.

ಶ್ರೀ ಶಿವಲೀಲಾಮೃತವೆಂಬ ಶಿವಭಕ್ತರ ಕಥೆಗಳ ಪ್ರಥಮ ಭಾಗ ಮುಗಿದುದು.

॥ ಶ್ರೀ ಗುರು ಮಹಾಂತೇಶಪ್ರಸನ್ನ ।

# ಶಿವಲೀಲಾಮೃತ

ಎಂಬ

# ಶಿವಭಕ್ತರ ಕಥೆಗಳು.

## ೧೫ ನೆಯ ಅಧ್ಯಾಯ ಪ್ರಾರಂಭವು

## ದ್ವಿತೀಯ ಭಾಗ



(ಸಂಗ್ರಾಹಕರು-)

ಪಂಡಿತ, ವೇ. ತೋಟಪ್ಪಯ್ಯ ಶಾಸ್ತ್ರಿಗಳು ತೆಗ್ಗಿನಕೇರಿ ಹಿರೇಮಠ, ಗದಗ ನಗರ.

---

## ಮುಗ್ಧ ಭಕ್ತಳಾದ ಬಿಜ್ಜಮಹಾದೇವಿಯ ಕಥೆ.

ಪೂರ್ವದಲ್ಲಿ ಸಹಜಭಕ್ತಿಯಿಂದ ಕೂಡಿದ ಬಿಜ್ಜಮಹಾದೇವಿಯೆಂಬ ಒಬ್ಬ ಮುಗ್ಧಭಕ್ತೆಯಿದ್ದಳು. ಆಕೆಯು ಒಂದಾನೊಂದು ದಿವಸ ಆಲೋಚಿಸಿದ್ದೇನಂದರೆ- ಶಿವನಿಗೆ ತಾಯಿಯೇ ಇಲ್ಲ. ತಾಯಿಯಿದ್ದ ಪಕ್ಷದಲ್ಲಿ ಆತನ ಕೂದಲು ಏಕೆ ಜಡೆಗಟ್ಟುತ್ತಿತ್ತು, ದೇಹವು ಯಾವಾಗಲೂ ವಸ್ತ್ರರಹಿತವಾಗಿಯೂ, ಧೂಳಿಯಿಂದ ಮಲಿನವಾಗಿಯೂ ಇದ್ದೀತೆ? ತಲೆಯನ್ನು ಅರ್ಜುನನು ಗಡೆಯಿಂದಲೂ, ಸಾಂಖ್ಯನು ಕಲ್ಲಿನಿಂದಲೂ ಏಕೆ ಹೊಡೆಯುತ್ತಿದ್ದರು? ಕನ್ನಯ್ಯನು ಪಾದುಕೆಯಿಂದೊತ್ತಿ, ಬಾಯಲ್ಲಿ ತುಂಬಿಕೊಂಡ ನೀರನ್ನು ಏಕೆ ಉಗುಳುತ್ತಿದ್ದನು? ತಾಯಿಯಿದ್ದರೆ ಮಗನ ಹಾವುಗಳ ತೊಡಿಗೆಯನ್ನೂ, ಹುಲಿದೊಗಲ ಉಡಿಗೆಯನ್ನೂ, ಭಿಕ್ಷೆಯುತ್ತುವುದನ್ನೂ. ಸ್ಮಶಾನವಾಸವನ್ನೂ ಹೇಗೆ ಸಹಿಸುತ್ತಿದ್ದಳು. ಹೀಗಾಗುವದಕ್ಕೆ ಅನಾಥತ್ವವೇ ಕಾರಣವು ಬಾಣಾಸುರನು ಬಲಾತ್ಕಾರದಿಂದ ಬಾಗಿಲನ್ನು ಕಾಯಿಸಿದನು. ಪಾರ್ವತಾದೇವಿಯು ಅರ್ಧದೇಹವನ್ನೇ ಸೆಳೆದುಕೊಂಡಳು. ಇದು ಪಾಲಕರಿಲ್ಲದ ಅವಸ್ಥೆಯಲ್ಲವೇ? ಕುಂಬಾರ ಗುಂಡಯ್ಯನು ತಾನು ಇಡುವುದಕ್ಕಾಗಿ ತೆಗೆದುಕೊಂಡಿದ್ದ ಪಾತ್ರೆಯನ್ನು ಹಿಂದಿರುಗಿ ಕೊಡದೆ, ಹೆಂಡತಿ ಸಹಿತವಾಗಿ ಆಣೆಯನ್ನು ಇಟ್ಟು ಅಪಹರಿಸಿದನು ಈ ರೀತಿಯಾಗಿ ಆಲೋಚಿಸಿ ಆಕೆಯು ಶಿವನಿಗೆ ನಾನು ತಾಯಿಯೆಂಬ ಭಾವನೆಯನ್ನು ಹೊಂದಿದವಳಾಗಿ ತನ್ನ ಇಷ್ಟಲಿಂಗವನ್ನು ತೊಡೆಯಮೇಲಿಟ್ಟುಕೊಂಡು ಬಾಲಕಪ್ರೇಮವನ್ನು ಇಡಲು ಶಿವನುಕೂಡ ಬಾಲಕನಾಗಿ ಬಾಯನ್ನು ಬಿಟ್ಟು, ಸ್ವಲ್ಪವಾಗಿ ಕಣ್ಣುಗಳನ್ನು ಮುಚ್ಚಿಕೊಂಡು

ಕೈಗಳನ್ನು ಅಲ್ಲಾಡಿಸುತ್ತಾ ಅಳುವುದಕ್ಕೆ ಆರಂಭಿಸಿದನು. ಆಗ ಆ ಭಕ್ತೆಯು ರೋದನವನ್ನು ನಿಲ್ಲಿಸುವದಕ್ಕೆ ಉದ್ಯುಕ್ತಳಾಗಿ ಸ್ತುತಿಯಿಂದಲೂ, ಗಾನದಿಂದಲೂ, ಕಥೆಯಿಂದಲೂ ಲಾಲಿಸಿದಳು. ಸಕಲ ಲೋಕಗಳಿಗೂ ಆಶ್ರಯನಾದವನೇ ! ಆದಿಶೇಷನನ್ನು ಆಭರಣವನ್ನಾಗಿ ಮಾಡಿಕೊಂಡಿರುವವನೇ ! ಮನ್ಮಥಧ್ವಂಸಿಯೇ ! ನನ್ನ ಸ್ವಾಮಿಯೇ ! ನೀನು ಅಳಬೇಡ. ಉಪನಿಷತ್ತುಗಳಿಂದ ಕಾಣಲ್ಪಡದವನೇ ! ದೇವಶ್ರೇಷ್ಠನೇ ! ಪೂಜ್ಯನೇ ನೀನು ಅಳಬೇಡ. ಭಕ್ತರ ಮನಸ್ಸಿಗೆ ಅನುಕೂಲವಾದವನೇ! ಜನ್ಮವೆಂಬ ವೃಕ್ಷಕ್ಕೆ ಕೊಡಲಿಯಾದವನೇ ಮಹಾತ್ಮರಿಂದ ಪೂಜಿಸಲ್ಪಡತಕ್ಕವನೇ ! ನೀನು ಅಳಬೇಡ ಎಂದು ಜೋಗುಳವನ್ನು ಪಾಡಲು ಆ ಶಿಶುವು ಗಾನಸಹಿತವಾದ ಸ್ತುತಿಯನ್ನು ಕೇಳಿ, ಸುಮ್ಮನಾಗಲು; ಆಕೆಯು ಪ್ರೇಮದಿಂದ ಆ ಬಾಲಕನಿಗೆ ಶಿವಾತ್ಮಕವಾದ ಕಥೆಯನ್ನು ಹೇಳಲಾರಂಭಿಸಿದಳು. ಏನೆಂದರೆ-ಹಿಂದೆ ಕೃತಯುಗದಲ್ಲಿ ದಕ್ಷನೆಂಬ ಒಬ್ಬ ಬ್ರಹ್ಮನಿದ್ದನು. ಆತನು ತನ್ನ ಒಳ್ಳೇ ಅದೃಷ್ಟದಿಂದ ಶಿವನನ್ನು ಅಳಿಯನನ್ನಾಗಿ ಪಡೆದುಕೊಂಡು, ಇಂದ್ರ ಮೊದಲಾದ ದೇವತೆಗಳಿಂದಲೂ, ಇತರಾದ ದೇವರ್ಷಿಗಳಿಂದಲೂ, ಬಳಸಲ್ಪಟ್ಟವನಾಗಿ ನೂರು ಯಜ್ಞಗಳನ್ನು ಮಾಡಿದನು. ಯಜ್ಞಸ್ವಾಮಿಯಾದ ಶಿವನನ್ನು ಬಿಟ್ಟದ್ದರಿಂದ ಆ ಯಜ್ಞಗಳು ಸಾಂಗಗಳಾದಾಗ್ಯೂ ಪ್ರಾಣವಿಲ್ಲದ ಜಂತುಗಳಾಗಿ ಪರಿಣಮಿಸಿದುವು. ಆಗ ಶಿವಕಿಂಕರರು ದಕ್ಷನನ್ನು ಶಿವದ್ರೋಹಿಯೆಂದು ನಿಶ್ಚೈಸಿ, ವೀರಭದ್ರನನ್ನು ಮುಂದಿಟ್ಟುಕೊಂಡು ಯಜ್ಞಶಾಲೆಗೆ ಪ್ರವೇಶಿಸಿದರು. ಯಜ್ಞಾತ್ಮಕನಾದ ವಿಷ್ಣುವು ಪ್ರವೇಶಿಸುತ್ತಿರುವ ಪ್ರಮಥರನ್ನು ನೋಡಿ, ಬಹಳವಾಗಿ ಭಯಪಟ್ಟವನಾಗಿ ಓಡಿಹೋಗುವುದರಲ್ಲಿ ಅಸಕ್ತನಾದನು. ವೀರಭದ್ರನು ಓಡಿಹೋಗುತ್ತಿರುವ ಆ ವಿಷ್ಣುವಿನ ತಲೆಯನ್ನು ಆಯಾಸವಿಲ್ಲದೆ ಒಂದೇಬಾಣದಿಂದ ಛೇದಿಸಿ, ಕೋಪದಿಂದ ಅಗ್ನಿಯ ನಾಲಿಗೆಯನ್ನು ಏಳುಭಾಗಗಳನ್ನು ಮಾಡಿ, ಪೌರುಷವನ್ನು ತೋರಿಸುವದಕ್ಕೆ ಬಂದ ಪೂಷಕನೆಂಬ ಸೂರ್ಯನ ಹಲ್ಲುಗಳನ್ನು ಮುರಿದು, ಚಂದ್ರಮಂಡಲವನ್ನು ಕಾಲಿನಿಂದ ತಿಕ್ಕಲಾಗಿ ಜನಗಳು ಆ ಪಾದಮರ್ದನದಿಂದುಂಟಾದ ಜಡ್ಡನ್ನು ಕಳಂಕವೆಂದು ಹೇಳುತ್ತಾರೆ. ವೀರಭದ್ರನ ಉಗುರಿನಿಂದ ಕತ್ತರಿಸಲ್ಪಟ್ಟ, ತನ್ನ ಎಡದ ಕುಚಾಗ್ರವನ್ನು ಸರಸ್ವತಿಯು ವೀಣೆಯನ್ನು ಬಾರಿಸುವ ನೆವದಿಂದ ಮರೆ ಮಾಡಿಕೊಂಡಳು. ಯುದ್ಧಸನ್ನದ್ಧನಾದ ಚಕ್ರಪಾಣಿಯಾದ ವಿಷ್ಣುನ ತಲೆಯನ್ನೂ ಹಾಗೆಯೇ ದಕ್ಷನ ತಲೆಯನ್ನೂ ಒಂದೇ ಬಾಣದಿಂದ ಕತ್ತರಿಸಿ ಹೋಮಾಗ್ನಿಯಲ್ಲಿ ಹಾಕಿ ಋತ್ವಿಕ್ಕುಗಳ ಜಡೆಗಳನ್ನು ಕಿತ್ತು, ಅವುಗಳಿಂದ ಉಳಿದ ದೇವತೆಗಳನ್ನು ಬಿಗಿದು, ಯಜ್ಞಶಾಲೆಯನ್ನು ಹಣೆಗಣ್ಣಿನ ಉರಿಗಳ ಸಮೂಹದಿಂದ ವ್ಯಾಪ್ತವಾದುದನ್ನು ಮಾಡಿ, ಪ್ರಮಥರೊಡನೆ ಕಿಲಕಿಲ ಧ್ವನಿಯನ್ನು ಮಾಡಿ, ಸುಟ್ಟ ಹೋದ ಯಜ್ಞ ಶಾಲೆಯ ಬೂದಿಯನ್ನು ಮೈಗೆ ಸವರಿಕೊಂಡು ನೆಗೆದಾಡುತ್ತಿರುವ ಪ್ರಮಥರಿಂದ ಸುತ್ತಲ್ಪಟ್ಟವನಾಗಿ ಭದ್ರಕಾಳಿಯೊಡನೆ ವೃಷಭಾರೂಢನಾಗಿ ಹೊರಟುಹೋದನು. ಹೀಗೆಂಬ

ಸಲ್ಪಟ್ಟವನಾಗಿ ವಿಕಸಿತವಾದ ಕಣ್ಣುಗಳುಳ್ಳದ್ದಾಗಿಯೂ, ಶರಣಾರ್ಥಿ ಎಂದು ಹೇಳುತ್ತಿರುವದಾಗಿಯೂ ಇರುವ ತಲೆಯನ್ನು ತನ್ನ ಕುತ್ತಿಗೆ ಎಂಬ ಪೀಠದಲ್ಲಿ ಇಟ್ಟುಕೊಂಡನು. ಜೈನರು ಆತನ ಚರಣಕಮಲಗಳಿಗೆ ನಮಸ್ಕರಿಸಿದರು ಶಿವ ಯೋಗಿಯಾದ ಏಕಾಂತರಾಮಯ್ಯನು ಕೂಡ, ಆ ಜೈನರ ಹಣೆಯಲ್ಲಿ ಬಸವನ ಮುದ್ರೆಯನ್ನು ಒತ್ತಿದನು. ಶತ್ರುಗಳನ್ನು ಜೈಸಿದವನೂ, ಜಿನಾಲಯಗಳನ್ನೆಲ್ಲಾ ಧ್ವಂಸಮಾಡಿದವನೂ ಆದ ಆ ಭಕ್ತನನನ್ನು ಬಸವೇಶ್ವರನು ಕೂಡಿ ಭಕ್ತರೊಡನೆ ತನ್ನ ಮನೆಗೆ ಕರೆದುಕೊಂಡು ಹೋದನು.

ವೈಜವ್ವೆಯ ಚರಿತ್ರೆಯನ್ನು ಓದುವವರಿಗೆ ಉತ್ತಮವಾದ ಶ್ರೇಯಸ್ಸುಂಟಾಗುವದು. ಮತ್ತು ಅವರಿಗೆ ಶತ್ರುಗಳು ಮಾಡಿದ ಅಪಮಾನವು ತಿರುಗಿ ಆ ಶತ್ರುಗಳನ್ನೇ ಬಾಧಿಸುತ್ತದೆ.

ಇತ್ಯಾದಿ ಮಹಾ ಭಕ್ತರ ಕಥೆಯೆಂಬ ಅಮೃತವನ್ನು ನಿತ್ಯವೂ ಪ್ರಾತಃಕಾಲದಲ್ಲಿ ಯಾವನು ಪಾನಮಾಡುತ್ತಾನೋ ಅವನು ಪ್ರಸಿದ್ಧವಾದ ಭಕ್ತಿವುಳ್ಳವನಾಗಿ ಇಹದಲ್ಲಿ ದೀರ್ಘಾಯುಷ್ಯವನ್ನೂ ಕೀರ್ತಿಯನ್ನೂ ಪಡೆದು ಪರದಲ್ಲಿ ನಿಶ್ಚಯವಾಗಿ ಶಿವ ಸಾಮೀಪ್ಯವನ್ನು ಹೊಂದುತ್ತಾನೆ.

೧೭ ನೆಯ ಅಧ್ಯಾಯ ಮುಗಿದುದು



## ೧೮ ನೆಯ ಅಧ್ಯಾಯ ಪ್ರಾರಂಭವು.

**ಪ್ರತಿಯೊಬ್ಬ ವೀರಶೈವ ಸ್ತ್ರೀ ಪುರುಷರು ಅತ್ಯಾವಶ್ಯಕ ಓದತಕ್ಕಂಥ**

## ಮಹಾ-ಶಿವಶರಣೆ ಹೇಮರಡ್ಡಿ ಮಲ್ಲಮ್ಮ, ಪರಮ ವೈರಾಗ್ಯ ಶಾಲಿನಿ ಅಕ್ಕ ಮಹಾದೇವಿ ಇವರ ಚರಿತ್ರೆಗಳು.

## ಮಹಾಶಿವಶರಣೆ - ಹೇಮರಡ್ಡಿ ಮಲ್ಲಮ್ಮನ ಕತೆ.

ಈ ನಮ್ಮ ಕರ್ನಾಟಕದ ಮೂಡಲ ದಿಕ್ಕಿಗೆ "ಶ್ರೀಶೈಲ" ವುಂಟಷ್ಟೇ ಆ ಶ್ರೇಷ್ಠವಾದ ಬೆಟ್ಟದ ವರ್ಣನೆಯನ್ನು ಎಷ್ಟು ಮಾಡಿದರೂ ಕೊನೆಯನ್ನೇ ಮುಟ್ಟಲಾರದು. ಎಲ್ಲಿ ನೋಡಿದಲ್ಲೆಲ್ಲ ಹಾರಾಡುವ ಹಕ್ಕಿಗಳ ಗಾಯನದ ಇಂಪು ಚೆಲ್ಲಾಟವಾಡುವ ಚೆಲುವ ಮೃಗಗಳ ಗುಂಪು !! ಥಳಥಳಿಸುವ ತಿಳಿಗೊಳದ ತಂಪು !!! ಸೊಗಯಿಸುವ ಗಿಡ-ಮರಗಳ ಸೊಂಪು ! ಕಂಗೊಳಿಸುವ ಹೂ ಬಳ್ಳಿಗಳ ಕಂಪು !! ತಪಸ್ಸುಮಾಡುವ ಶಿವಯೋಗಿಗಳ ಪೆಂಪು !!! ಆಹಾ ! ಇದೆಂತಹ

ಸೊಬಗಿನ ಸುಗ್ಗಿ!! ನೋಟಕರು ಕುಣಿಯದಿರುವರೆ ಹಿರಿಹಿರಿ ಹಿಗ್ಗಿ? ಇಂತಿರುವ ಪರ್ವತದ ನೆರೆಗೇನೇ ಸಿದ್ದಾಪುರವೆಂಬ ಗ್ರಾಮವಿದೆ. ಪೂರ್ವಕಾಲದಲ್ಲಿ ಅಲ್ಲೊಬ್ಬ ಶಿವಭಕ್ತನಿದ್ದನು ಅವನೇ ಹೇಮರಡ್ಡಿ, ಹೆಸರಿಗೆ ತಕ್ಕಂತೆ ಅವನು ಹೆಸರಾದ ಸಿರಿವಂತ (ಹೇಮವುಳ್ಳವ) ರಡ್ಡಿಯ ಕುಲದವನೆಂದು ಬೇರೆ ಹೇಳಬೇಕೆ? ದುಡ್ಡಿದ್ದವನಾದರೇನಾಯ್ತು? ಅವನು ಎಂದಿಗೂ ದೊಡ್ಡಗುಣಗಳಿಗೆ ಹೊರತಾಗಲಿಲ್ಲ, ಮಡ್ಡ ಒಕ್ಕಲಿಗನಾದರೂ, ಅವನು ಈಗಿನ ಕೆಲವು ಸುಶಿಕ್ಷಿತರಂತೆ ಮಾತ್ರ ಒಮ್ಮೆಯೂ ಅಡ್ಡ ಹಾದಿಯನ್ನು ಹಿಡಿಯಲಿಲ್ಲ. ಅವನಿಗೆ ಯಾವ ಸುಖ-ಸೌಲಭ್ಯಗಳಿಗೂ ಕೊರತೆಯಿರಲಿಲ್ಲ ಮನೆತುಂಬ ಮಂದಿ, ನಂಬಿಗೆಯ ಆಳು-ಹೋಳುಗಳು ಯಾವಾಗಲೂ ಟೊಂಕಕಟ್ಟಿ ದುಡಿಯುತ್ತಿದ್ದರು; ಹುಲಿಯಂತಹ ಮೂವರು ಗಂಡುಮಕ್ಕಳು ಆಗ ತಾನೆ ಹೆಂಡಂದಿರೊಂದಿಗೆ ಹೊಸಬಾಳನ್ನು ಹೂಡಿದ್ದರು; ವರುವರುಷಕ್ಕೆ ಹೊಲದ ಪೈರೂ ಚನ್ನಾಗಿ ಬರುತ್ತಿತ್ತು. ಆ ಮುದುಕ ಹೇಮರಡ್ಡಿಗಾಗುತ್ತಿದ್ದ ಆಗಿನ ಆನಂದವನ್ನು ನುರಿತ ಮುದುಕರಿಂದಲೇ ಕೇಳಿ ನೋಡಬೇಕು! ಒಳ್ಳೆಯವರಿಗಲ್ಲದೆ ದೇವರು ಇನ್ನಾರಿಗೆ ಒಲಿಯುವನು?

ಸಿದ್ಧಾಪುರಕ್ಕೆ ಸಮೀಪವಾಗಿರುವ ಸಣ್ಣ ಮಲ್ಲಾಪುರದಲ್ಲಿ ಸೋಮರಡ್ಡಿಯೆಂಬವನು ಮಡದಿ ಮಹಾದೇವಿಯ ಸಂಗಡ ಉಲ್ಲಾಸದಿಂದ ಸಂಸಾರ ಸಾಗಿಸುತ್ತಿದ್ದನು ಗಂಡ ಹೆಂಡಿರಿಬ್ಬರು ಮಲ್ಲಿಕಾರ್ಜುನನ ಸೇವೆಯಂದರೆ ಬಲು ಜೀವ; ಆತನ ನೆನಹು ಎಂದರೆ ತುಪ್ಪ-ಸಕ್ಕರೆ ಸವಿದಂತೆ, ಅವರ ಹೃತ್ಪೂರ್ವಕ ಸೇವೆಯ ಪ್ರತಿಫಲವೋ! ಇಲ್ಲವೆ, ಪೂರ್ವಪುಣ್ಯದ ಪರಿಪಾಕವೊ!! ಎಂಬಂತೆ, ಕಥಾನಾಯಕಿಯಾದ ನಮ್ಮ ಮಲ್ಲಮ್ಮ ತಾಯಿಯು ಅವರ ಮನೆಯಲ್ಲಿ ಹುಟ್ಟಿ, ಬಿದಿಗೆಯ ಚಂದಿರನಂತೆ ಬೆಳೆದು, ವಯಸ್ಸಿಗೆ ಬಂದಳು. ಮಹಾದೇವಿಯ ಅವತಾರವು ಮಹಾದೇವಿಯಲ್ಲಿಯೇ ಆಯಿತೆಂದು ಊರ ಜನರೆಲ್ಲ ಒಂದೇಸವನೆ ಹೊಗಳಹತ್ತಿದರು. ಇರಲಿ! ಹೇಮರಡ್ಡಿಗೂ ಸೋಮರಡ್ಡಿಗೂ ಬೀಗತನವಾದ ವಿಷಯವು ನಿಮಗೆ ಗೊತ್ತುಂಟೇ? ಹೇಮರಡ್ಡಿಯ ಕಿರಿಯಮಗ ಭರಮರಡ್ಡಿಗೆ ಸೋಮರಡ್ಡಿಯು ತನ್ನ ಮುದ್ದು ಮಗಳಾದ ಮಲ್ಲಮ್ಮನನ್ನು ಕೊಟ್ಟು ಮದುವೆ ಮಾಡಿದನು. ಕೆಲದಿನದ ಮೇಲೆ ಬೀಗರು ಹೊಸಮದಲಗಿತ್ತಿಯನ್ನು ಕರೆದುಕೊಂಡು ಹೋಗಲು ಬಂದರು. ಆ ವಾಗ ಅವಳ (ಮಲ್ಲಮ್ಮನ) ತಾಯ್ತಂದೆಗಳಿಗೆ ಮೈಮೇಲೆ ಮುಗಿಲೇ ಹರಿದು ಬಿದ್ದ ಹಾಗಾಯಿತು. ರನ್ನದಂತಹ ಚೆನ್ನಗುವರಿಯನ್ನು ಲಾಲಿಸಿ-ಪಾಲಿಸಿ, ಇನ್ನುಮುಂದೆ ಹೆರವರ ಮನೆಗೆ ಕಳುಹಿಸಬೇಕಾಯಿತಲ್ಲ! ಎಂದು ಮುಂತಾಗಿ ಪರಿಪರಿಯಿಂದ ಕೊರಗಿದರು; ಮರುಗಿದರು, ಸೊರಗಿದರು. ಆದರೇನು? ಹುಟ್ಟಿದ ಹೆಣ್ಣು ಕೊಟ್ಟ ಮನೆಗಲ್ಲದೆ ಇಟ್ಟುಕೊಳ್ಳಲಿಕ್ಕೆ ಬರುವದೆ?

ನೋಡು ನೋಡುವಷ್ಟರಲ್ಲಿ ಮುತ್ತೈದೆಯರೆಲ್ಲ ಕೂಡಿದರು; ನಲಿನಲಿದು ಆಡಿದರು; ಮಲ್ಲಮ್ಮನಿಗೆ ಎಣ್ಣೆಹೂಸಿ ಮಮತೆಯಿಂದ ಮೈದೊಳೆದರು; ಚಂದನ ವನ್ನು ಬಳೆದರು; ಉತ್ತಮವಾದ ಉಡುಗರೆ ಕೊಟ್ಟರು; ಆಭರಣವಿಟ್ಟರು; ಉತ್ಸಾಹದಿಂದ ಉಡಿಯನ್ನು ತುಂಬಿದರು; ಅವಳು ಕೊಟ್ಟ-ಹುಟ್ಟಿದ ಮನೆಗ ಳೆರಡನ್ನು ಉದ್ಧರಿಸುವಳೆಂದು ನಂಬಿದರು, ಶಾಸಿಯನ್ನು ನೀಡಿದರು; ನಲುಮೆಯ ನೋಟದಿಂದ ನೋಡಿದರು; ಬಳಿಕ ಬಗೆಬಗೆಯ ಮಂಗಳಕರವಾದ ಹಾಡುಗ ಳನ್ನು ಮನದಣಿಯುವಂತೆ ಹಾಡಿದರು; ಆರತಿಯನ್ನು ಮಾಡಿದರು. ಮುಂದೆ ಮಲ್ಲಮ್ಮನು ನೆರೆದ ಗುರು-ಹಿರಿಯರಿಗೆ ವಂದಿಸಿ, ಆಶೀರ್ವಾದಹೊಂದಿ ದುಃಖಿ ಸುವ ತಾಯಿ-ತಂದೆ-ಗೆಳತಿಯರನ್ನು ತನ್ನ ಜಾಣ್ಮೆಯ ವಿಚಾರಗಳಿಂದ ಸಂತೈಸಿ, ಅವರಿಂದಲೂ ಹರಕೆಯೊಪ್ಪಿಗೆಗಳನ್ನು ಪಡೆದು, ಅತಿ ಸಂತೋಷ ಚಿತ್ತಳಾಗಿ ಅತ್ತೆ ಯಮನೆಗೆ ತೆರಳಿದಳು.

ಲೋಕದಲ್ಲಿ ಸಜ್ಜನರಿಗೆ ಸಂಕಟಗಳು ಬಹಳ. ಮಲ್ಲಮ್ಮನು ಅತ್ತೆಯ ಮನೆಗೆ ಬಂದು ವರ್ಷಾರ್ಧವಾದರೂ ಗತಿಸಿರಲಿಕ್ಕಿಲ್ಲ. ಪಾಪ ! ಸುರುವಾಯ್ತು ಅತ್ತೆ-ನೆಗೆಯಣ್ಣೆಯರ ಕಾಟ !! ಅವಳು ಮಾಡುವ ಯಾವ ಕೆಲಸ-ಬೊಗಸೆಗ ಳನ್ನೂ ಅವರು ಸೇರುತ್ತಿದ್ದಿಲ್ಲ. ಹೊತ್ತುಹೊತ್ತಿಗೆ ಹೊಟ್ಟೇಕಿಚ್ಚಿನ ಪ್ರದರ್ಶನ; ಬಾರಿಬಾರಿಗೆ ಬೈಗಳದ ಸುರಿಮಳೆ. ಅದೋ !ಅಲ್ಲಿ ಏನೋ ಮಾತು-ಕತೆ ನಡೆ ದಂತೆ ಕಾಣುತ್ತದೆ. ಮೆಲ್ಲಗೆ ಬನ್ನಿ ! ಮರೆಯಾಗಿ ಸಿಂತುಕೇಳೋಣ ! !

" ಅಕ್ಕಾ ! ಮಲ್ಲಿಯು ಮಾವನಿಗೂ ಕೂಡ ಮಂಕುಬೂದಿ ಹಚ್ಚಿರುವಳು ನೋಡೇ ! "

" ಹೌದು ತಂಗೀ ! ತನ್ನ ಗಂಡನಿಗಂತೂ ಆ ಭಂಡಿಯು ಎಂದೋ ಮಾಟ ಮಾಡಿರುವಳು ! ಏನು ಅವಳ ಬುದ್ಧಿಯ ಚುರುಕು ಽ !! ಏನು ಅವಳ ಮುರು ಕು ಽ !! ಏನು ಅವಳ ಮಡಿ ಽ !! ಏನು ಅವಳ ಮುಡಿ ಽ !! ಹಗಲೆಲ್ಲ ಬಸವಿ ಯರಂತೆ ಬಾಚಿಕೊಂಡು ತಿರುಗುವದು, ಇದೆಲ್ಲಿಯ ನಡತೆಯೆ ? ಜಳಕವಂತೆ ! ಪೂಜೆಯಂತೆ !! ಆ ಕಲ್ಲುಮಲ್ಲಯ್ಯನಿಗೆ ನೈವೇದ್ಯವಂತೆ !!! ನಾವು ದುಡಿದುಡಿದು ಸಾಯಬೇಕಂತೆ ! ತಾನು ಮಾತ್ರ ಜೈನೀ ಚೆನ್ನಿಯಾಗಿ ಚಕ್ಕಂದ ಹೊಡೆಯ ಬೇಕಂತೆ ! "

" ಒಟ್ಟಿನಮೇಲೆ ಅಂತೆಗಳ ಸಂತೆ ! ಅವಳಿಗೆಲ್ಲಿದೆ ಮನೆಯ ಚಿಂತೆ ? ಅಕ್ಕಾ ! ನೋಡಿದಿಯಾ ! ಅವಳು ಮೊದಲು ಹೇಗಿದ್ದಳು ? ಇತ್ತಿತ್ತಲಾಗಿ ಎಡಿಯ ಕೂಳು ತಿಂದು ತಿಂದು ಕೊಬ್ಬಿದ ಕೋಣನಂತಾಗಿದ್ದಾಳೆ ! "

" ಅಲ್ಲ ತಂಗೀ ! ಉಬ್ಬಿದ ತಿದಿಯಾಗಿದ್ದಾಳೆ ! ಹೊಲಮನೆಯ ಬಾಳ್ವೆ ಯಿದ್ದವರಿಗೆ ಇಷ್ಟೆಲ್ಲ ಗೊಡ್ಡು ಆಚಾರವೇಕೆ ಬೇಕು ? ರಡ್ಡಿಯವರಾದ ನಾವು ಮುಟ್ಟಾದಾಗೊಮ್ಮೆ-ಹಬ್ಬ ಹುಣ್ಣಿವೆಗೊಮ್ಮೆ ಮೈತೊಳಕೊಂಡರೆ ಸಾಕು ! "

" ನಾಗಕ್ಕಾ ! ಅವಳ ಈ ಆಳಿಕೆಯಲ್ಲಿ ನಮ್ಮ ಬೇಳೆ ಬೇಯುವದೇ ಕಠಿಣ ! "

" ಬಸವಮ್ಮಾ ! ಹಾಗೆನ್ನಬೇಡ ! ಸ್ತ್ರೀ ಜಾತಿಗೆ ಕುಂದು ಬಂದೀತು ! ಸಂಚನ ಸಂಚಯುವೇ ನಮ್ಮಲ್ಲಿರುವಾಗ ಕೊಂಚವೂ ಅನುಮಾನಿಸಬೇಡ ! ಕೇಳು ! ಉಪ್ಪುಕಾರ ಹೆಚ್ಚುಹಾಕಿ ಆ ಮಲ್ಲಿಯು ಮಾಡಿದ ಅಡಿಗೆಯನ್ನು ಕೆಡಿಸಬೇಕು; ಗಡಿಗೆ ಹರಿವೆಗಳನ್ನೊಡೆದು, ಅವಳ ಮೇಲೆ ತಪ್ಪು ಹೊರಿಸಬೇಕು; ಅಲ್ಲಿ ಹೋಗುವಳು, ಇಲ್ಲಿ ಹೋಗುವಳು, ಹಾಗೆಮಾಡುವಳು, ಹೀಗೆಮಾಡುವಳು, ಎಂದು ಮಾತಿಗೆ ಬಣ್ಣಕೊಟ್ಟು ಅತ್ತೆಯಮುಂದೆ ಇಲ್ಲದ್ದೊಂದು ತೋಡಿಕೊಳ್ಳ ಬೇಕು. ಇವೆಲ್ಲ ಹಂಚಿಕೆಗಳು ಸಾಧಿಸಿದ ನಂತರ ಅವಳನ್ನು ಆಕಳ ಕಾಯುಲಿಕ್ಕೆ ಅಡವಿಗಟ್ಟುವ ಯತ್ನಮಾಡಬೇಕು; ಅಲ್ಲಿ ಸೆಗಣಿ ತೆಗೆದು ಕಿಟ್ಟಕ್ಕೆ ಹಾಕುವ ಕೆಲಸ ವನ್ನೂ, ಇಲ್ಲಿ ಸಾಕಷ್ಟು ನೀರು ತಂದು, ಪುಟ್ಟಿ ಪುಟ್ಟಿ ಕಾಳು ಬೀಸುವ ಕೆಲಸ ವನ್ನೂ ಅವಳಿಗೆ ನೇಮಿಸುವಂತೆ ಮಾಡಿಯೇ ತೀರಬೇಕು; ಮತ್ತು ಆ ಹೊಯ್ಮಾ ಲಿಗೆ ಭರಮಪ್ಪಡ್ಡಿಯ ದರ್ಶನವಾಗದಹಾಗೆ ವ್ಯವಸ್ಥೆಯನ್ನಿಡಬೇಕು ಬಸವಮ್ಮಾ! ಇನ್ನುಮೇಲೆ ನಾವು ಅತ್ತೆಯವರಿಗೆ ದಿನಾಲು ಮೆತ್ತನ್ನ 'ಮಮ್ಮ' ಕುಚ್ಚಿ ಹಾಕಬೇಕು ಮಮ್ಮಾ ! "

( ಹೋಗುವರು )

ಹೀಗೆ ಮಾತಾಡಿದವರು ಅವರಾರು ? ಮಲ್ಲಮ್ಮನ ನೆಗೆವೆಣ್ಣೆಯರಿರಲಿಕ್ಕೆ ಬೇಕೆಂದು ನೀವು ಊಹಿಸಿರಬಹುದಲ್ಲವೆ ? ನಿಜ. ಮತ್ತೇನು ? ಕತ್ತೆಯನ್ನು ಹೋಲುವ ಅತ್ತೆಯು ಸತ್ಯಾಸತ್ಯವನ್ನು ಯೋಚಿಸುವಳೆ ? ಅವಳು ಅವರೀರ್ವರ ಅಧೀನಳಾಗಿಯೇ ಬಿಟ್ಟಳು. ಅವರ ಒಳಸಂಚಿನ ಬೀಜವು ತುಸು ದಿವಸದಲ್ಲಿಯೇ ಮೊಳೆತು, ಮರವಾಗಿ ಪರಿಣಮಿಸಿತು. ಅಯ್ಯೋ ಪಾಪ ! ಅತ್ತೆಯು ಅಪ್ಪಣೆಯಂತೆ ನಿರಪರಾಧಿಯಾದ-ಕೋಮಲೆಯಾದ ಮಲ್ಲಮ್ಮ ತಾಯಿಯು ಹರಕು ಸೀರೆಯನ್ನು ಟ್ಟುಕೊಂಡು, ಹಳಸಿದ ಅಂಬಲಿಯನ್ನು ಕಟ್ಟಿಕೊಂಡು, ದನಗಳನ್ನು ಬಿಟ್ಟು ಕೊಂಡು, ಕಲ್ಲು-ಮುಳ್ಳು ತುಳಿಯುತ್ತಾ ಕಾಡಿಗೆ ಹೋಗಬೇಕಾಯಿತೆ ! ಬಿಸಿಲು-ಚಳಿ-ಮಳೆ-ಗಾಳಿಯನ್ನದೆ ಅಡವಿಯುಡವಿ ಅಲೆದಲೆದು, ಸೆಗಣಿಯನ್ನು ಕೂಡಿಹಾ ಕಬೇಕಾಯಿತೆ !! ದಣಿದು ಮನೆಗೆ ಬಂದರೆ ಅವಳಿಗೆ ವಿಶ್ರಾಂತಿ ಸಿಕ್ಕುತ್ತಿತ್ತೆನ್ನು ವಿರೇನು ? ಇಲ್ಲ ಇಲ್ಲ ! ಮೈ ಕೈ ನೋಯುವಂತೆ ನೀರು ಹೊರಬೇಕು ! ಮತ್ತೆ ಮೇಲೆ ಒಬ್ಬಳೇ ಪುಟ್ಟಿ ಜೋಳ ಬೀಸಬೇಕು !! ಎಲ್ಲರಿಂದಲೂ ಬೈಯಿಸಿಕೊಳ್ಳ ಬೇಕು; ಬಡಿಸಿಕೊಳ್ಳಬೇಕು ಗಂಡನಿಗೆ ಭೆಟ್ಟಿಯಾಗುವಂತಿಲ್ಲ ! ಶಿವ ಶಿವಾ ! ಒಬ್ಬರೂ ಅವಳನ್ನು ಮುಂದೆ ಕರೆಯುವವರಿದ್ದಿಲ್ಲವೆ ? ಮುದುಕ ಮಾವನೊಬ್ಬನು ಅವಳ ಪಕ್ಷವಹಿಸಿ, ಹಿಂದುಗಡೆ ತಾನೇ ಸುಮಾರಾಗುತ್ತಿದ್ದನು. ಬಲವಿಲ್ಲದ ಕಾಲಕ್ಕೆ ನೆಲವೆದ್ದು ಬಡಿಯುವದು ಸಹಜ. ಎಳೆಯಳಾದ ಮಲ್ಲಮ್ಮನ ಎಡ ರುಗಳಿಗೆ ಎಲ್ಲೆಯಿಲ್ಲದಾಯ್ತು. ಕಷ್ಟಗಳು ಏಕಮುಖವಾಗಿ ಬರುವದೇ

ಕ್ಷೆಚಿತ. ಇಷ್ಟಾದರೂ ನಮ್ಮ ಮಲ್ಲಮ್ಮಾಂಬೆಯು ಅತ್ತೆ-ಭಾವ ನೆಗೆವೆಣ್ಣಿಯ
ರಿಗೆ ಒಂದುಸಲವೂ ಎದುರು ನುಡಿಯನ್ನಾಡಲಿಲ್ಲ ! ಪತಿಯ ಅಗಲುವಿಕೆಯಿಂದ
ಕುಗ್ಗಲಿಲ್ಲ ! ತಾರುಣ್ಯದ ತಳಮಳಕ್ಕೆ ತಗ್ಗಲಿಲ್ಲ; ತ್ರಾಸುಗಳಿಗೆ ಬಗ್ಗಲಿಲ್ಲ, ಅತ್ತೆ-
ಮಾವಂದಿರ ಅಳ್ತನದಲ್ಲಿ ಎಳ್ಳಷ್ಟೂ ಅನಾದರವನ್ನು ತಾಳಲಿಲ್ಲ; ಮನೆಯ
ಮಾತನ್ನು ಪರರಿಗೆ ಹೇಳಲಿಲ್ಲ; ತನ್ನ ಕುಲಗುರುವಾದ ಮಲ್ಲಿಕಾರ್ಜುನನ ಧ್ಯಾನ
ವನ್ನು ಒಂದರಗಳಿಗೆಯೂ ಬಿಡಲಿಲ್ಲ. ಪರಮ ಪವಿತ್ರವಾದ, ಅಪಾರ ಪುಣ್ಯ
ಪ್ರದವಾದ ಗೋಮಾತೆಯ ಸೇವೆಯಲ್ಲಿ ತನ್ನನ್ನು ನಿರತಳನ್ನಾಗಿ ಮಾಡಿ
ದುದಕ್ಕೆ ಅತ್ತೆ ನೆಗೆವೆಣ್ಣಿಯರ ಮಹೋಪಕಾರವನ್ನು ತಾಸುತಾಸಿಗೂ
ಸ್ಮರಿಸುತ್ತಿದ್ದಳು. ನೋಡಿದಿರಾ ! ಮಹಾತಾಯಿ-ಮಲ್ಲಮ್ಮನ ಮನೋಸ್ಥೈರ್ಯ
ವನ್ನು ! ಶ್ರಮಸಹಿಷ್ಣುತೆಯನ್ನು !! ಶಾಂತ ಸ್ವಭಾವವನ್ನು !!! ಅಲ್ಲದೆ ಉದಾ
ರಮನಸ್ಸನ್ನು ! ಉದಾತ್ತ ವಿಚಾರ-ಸರಣಿಯನ್ನು !!

ಮುಂಜಾನೆ ಮನೆಯ ಕೆಲಸ ಮುಗಿಸಿಕೊಂಡು, ಮಲ್ಲಮ್ಮನು ಅರಣ್ಯದ
ಲ್ಲಿಯ ತನ್ನ ಗುಡಿಸಲಿಗೆ ಹೋಗುವ ರೂಢಿ. ಆಕಳುಗಳನ್ನು ಒಂದೆಡೆಗೆ ಮೇಯ
ಲಿಕ್ಕೆ ಬಿಟ್ಟು, ಅಡ್ನಾಡಿ-ಕಾಡು ಹೂ-ಪತ್ರಿಗಳನ್ನು ತರುತ್ತಿದ್ದಳು; ಸ್ನಾನಮಾಡಿ
ಶುಚಿಯಿಂದಲೂ, ನಿಷ್ಠೆಯಿಂದಲೂ ಶ್ರೀ ಮಲ್ಲಿಕಾರ್ಜುನ ಲಿಂಗವನ್ನು ಪೂಜಿಸಿ,
ಅನನ್ಯಭಾವದಿಂದ ಭಜನೆಮಾಡುತ್ತಾ, ಹುಳಿ ಅಂಬಲಿಯನ್ನೇ ಎಡೆ ಹಿಡಿಯು
ತ್ತಿದ್ದಳು; ಇಷ್ಟಲಿಂಗಕ್ಕೂ ಅದೇ ರೀತಿ. ಪಾಲಿಗೆ ಬಂದದ್ದೇ ಪಂಚಾಮೃತ
ವೆಂದರಿದು, ತುತ್ತಿಗೊಮ್ಮೆ 'ಮಲ್ಲಿನಾಥ' ಎನ್ನುತ್ತಲೂ, ಗಂಡನನ್ನು ನೆನೆಯು
ತ್ತಲೂ ಪ್ರಸಾದವನ್ನು ಸೇವಿಸುತ್ತಿದ್ದಳು; ತನ್ನ ಮನೆತನಕ್ಕೆ ಯಾವಾಗಲೂ
ಕಲ್ಯಾಣವನ್ನೇ ಬಯಸುತ್ತಿದ್ದಳು. ಅದೇ ಅವಳ ನಿತ್ಯ ನಿಯಮ-ಜಪ-ತಪ.
ಈಪ್ರಕಾರ ಕೆಲವುಕಾಲ ಕಳೆಯಿತು. ಪಾವನಳಾದ ಮಲ್ಲಮ್ಮನ ಪಾತಿವ್ರತ್ಯದ
ಪ್ರತಿಭೆಯನ್ನು ಜಗತ್ತಿನಲ್ಲಿ ಪ್ರಕಟಿಸುವದಕ್ಕೋ ! ಅಥವಾ ಅವಳ ಉಚ್ಚಭಕ್ತಿ
ಯ ಹೆಚ್ಚಳವನ್ನು ಬಿಚ್ಚುವದಕ್ಕೋ ಏನೋ ! ಎಂಬಂತೆ ಮಲ್ಲಿಕಾರ್ಜುನನು
ಒಂದು ದಿನ ಜಂಗಮನಾಗಿ ಅವಳ ಪರ್ಣಕುಟೀರಕ್ಕೆ ಬಂದು, "ಅಮ್ಮಾ !
ಬಹಳ ಹಸಿವೆಯಾಗಿದೆ !" ಎಂದು ದೀನ ಸ್ವರದಿಂದ ಒದರಿದನು. ಮಹಾಕರುಣಿ
ಶಿವಶರಣಿ ಮಲ್ಲಮ್ಮನು ಕೂಡಲೆ ಅವನನ್ನು ಒಳಗೆ ಕರೆದು, ಗದ್ದುಗೆ ಹಾಕಿ
ಕುಳ್ಳಿರಿಸಿ, ಪಾದಪೂಜೆಮಾಡಿ, ಮನೆಯಿಂದ ಅದೇ ತಂದಿದ್ದ ಅಂಬಲಿಯನ್ನು
ಭಯಭಕ್ತಿಯಿಂದ ಅವನಿಗೆ ಬಡಿಸಿದಳು. ನಂಬಿಗೆಯ ರಸವೆರೆದ ಆ ಅಂಬ
ಲಿಯು ಸಾಂಬನಿಗೆ ರುಚಿಸದಿರುವದೇ ? ಅವನು ಸಂತುಷ್ಟನಾಗಿ ಮೆಚ್ಚಿ,
ಅವಳನ್ನು ಹಾಡಿಹರಿಸಿದನು. ಅಂದು ಮಲ್ಲಮ್ಮನಿಗೆ ಎದೆ ಹಿಡಿಯಲಾರದಷ್ಟು
ಆನಂದ; ಹೊಸ ತೆರನಾದ ಹಬ್ಬ ತಾನು. ಪ್ರತಿದಿವಸ ಪೂಜಿಸುತಿದ್ದ ಲಿಂಗವೇ
ಚರವೇಷದಿಂದ ಬಂದಿರಬಹುದೇ ! ಎಂದು ಭಾವಿಸಿದಳು; ಮಲ್ಲಿಕಾರ್ಜುನನಲ್ಲದೆ

ಇತನು ಮತ್ತಾರೂ ಅಲ್ಲವೆಂತಲೂ ನೆಚ್ಚಿದಳು. ಅಂದಿನಿಂದ ಆ ಜಂಗಮನು ಅವಳ ಬೇಡಿಕೆಯಂತೆ ಅತ್ಯಪೂರ್ವ ಸೇವೆಯನ್ನು ಕೈಕೊಳ್ಳತೊಡಗಿದನು; ಮತ್ತು ಅವಳಿಗೆ ಪಾರಮಾರ್ಥ ತತ್ವವನ್ನು ಬೋಧಿಸಲಾರಂಭಿಸಿದನು. ಇಷ್ಟೇ ಅಲ್ಲ! ಅವಳ ದುಃಸ್ಥಿತಿಯನ್ನು ಕಣ್ಣಾರೆ ಕಂಡು ಮರಮರನೆ ಮರುಗಿದನು. ಅವಳು ಬೇಡೆಂದರೂ ಅವಳ ಹಸುಗಳನ್ನು ಬಲು ಕಾಳಜಿಯಿಂದ ಕಾಯ್ದನು; ಮಾಯಾ ರೂಪದಿಂದ ಅವಳ ಮನೆಗೆ ಹೋಗಿ, ಎಲ್ಲ ಧಾನ್ಯವನ್ನು ಬೀಸಿ ಬರುತ್ತಿದ್ದನು. ಧನ್ಯೆ! ಧನ್ಯೆ!! ಮಲ್ಲಮಾಂಬೆ! ನೀನೆ ಜಗನ್ಮಾನ್ಯೆ!! ಸಾಕ್ಷಾತ್ ಮಲ್ಲಿಕಾರ್ಜುನನೇ ನಿನ್ನ ದಾಸಾನುದಾಸನಾಗಿ ದುಡಿದನಲ್ಲವೇ? ಭಕ್ತಿಪಾಶದ ಎಳೆತವು ಸಾಮಾನ್ಯವಾದುದಲ್ಲ! ಶಂಕರನು ಸದ್ಭಕ್ತ ಕಿಂಕರನು, ಎಂಬ ಮಾತಿನ ಹುರುಳು ಈವಾಗ ಹೊಳೆಯಿತು. ಪ್ರಿಯ ಓದುಗರೇ! ಇನ್ನೇನು? ನಮ್ಮ ಮಲ್ಲಮ್ಮತಾಯಿಗೆ ಯಾವ ಅಂಜಿಕೆಯಿಲ್ಲ. ಅವಳನ್ನು ಸಲ್ಪ ಹೊತ್ತು ಅಡವಿಯಲ್ಲಿಯೇ ಬಿಟ್ಟು, ಅವಳ ಮನೆಯ ಕಡೆಗಿಷ್ಟು ಹೋಗೋಣ, ಬರುವಿರಾ?

ಅಬ್ಬ! ಇತ್ತ ನೋಡಿ! ಹೇಮರಡ್ಡಿಯ ಪ್ರಪಂಚ ಸಾಮ್ರಾಜ್ಯಕ್ಕೆ ಅವನ ಅರ್ಧಾಂಗಿನಿಯೇ ಸರ್ವಾಧಿಕಾರಿಣಿ-ನಿರಂಕುಶ ಚಕ್ರವರ್ತಿನಿ!! ಹಿರಿಯ ಸೊಸೆಯರೇ ಮುಖ್ಯ ಮಂತ್ರಿಣಿಯರು (ನಾಗಮ್ಮ-ಬಸಮ್ಮ) ಪಗಡೆಯ ಆಟದಲ್ಲಿ ಮಗ್ನರಾಗಿದ್ದರು. ಅದೇ ಸಮಯಕ್ಕೆ ಬಾಗಿಲಮುಂದೆ ಒಬ್ಬ ಜಂಗಮನು ನಿಂತು, "ಅಮ್ಮಗಳಿರಾ! ಒಂದಿಷ್ಟು ಅನ್ನವನ್ನು ನೀಡಿರಿ! ಹಸಿವೆಯಿಂದ ಕಂಗೆಟ್ಟಿರುವೆ" ಎಂದು ಬಿದ್ದ ದನಿಯಿಂದ ಕೂಗಿಯೇ ಕೂಕಿದ; ಆದರೆ ಹೊಟ್ಟೆ ತುಂಬಿದ ಆ ಕೆಟ್ಟ ಸೊಸೆಯರ ಲಕ್ಷ್ಯವು ಹಸಿದು ಹಲುಬುವ ಕಂಗಾಲನ ಕಡೆಗೆ ಹೇಗೆ ಹೊರಳುವದೋ ಕಾಣೆ. ಜಂಗಮನು ಮತ್ತೂ ಕೂಗಿದ; ಆಗ ಅವರು ಸಿಟ್ಟಿನಿಂದ ಚಟ್ಟನೆ ಎದ್ದು ಹೊರಗೆ ಬಂದು ಅವನ ಸೋಟೆತಿವಿಯುತ್ತ, "ನಿನಗೇನುಬೇನೆ? ಕಡಿದರೆ ಹತ್ತು ಮಂದಿಯಾಗುವಿ! ದುಡಿದು ತಿನ್ನಬಾರದೇ? ನೀಡಿಸಿಕೊಳ್ಳಲಿಕ್ಕೆ ನೀನೇನು ಮಂತ್ರಗಾರನೋ! ತಂತ್ರಗಾರನೋ!! ಜೋಗವ್ವನೇ! ಬುಡ ಬುಡಕಿಯೋ ನಡೆಯಾಚೆಗೆ!!" ಎಂದು ಗದ್ದರಿಸಿ, ಕುತ್ತಿಗೆಗೆ ಕೈಕೊಟ್ಟು ಒತ್ತಿಯಾಗಿ ನೂಕಿದರು. ನೆತ್ತಿಯನ್ನು ಕಟಕಟಿದು, ಬಾಸಾಳವೇಳುವಂತೆ ಬೆತ್ತದಿಂದ ಥಳಿಸಿದರು; ಇಷ್ಟಕ್ಕೆ ತೀರಲಿಲ್ಲ! ನಿಗಿ ನಿಗಿ ಕೆಂಡವನ್ನು ತಂದು ಅವನ ಜೋಳಿಗೆಯಲ್ಲಿ ಒಗೆದು, ನಕ್ಕು ಹಾಸ್ಯಮಾಡಿ, ಚಪ್ಪಾಳೆಯನ್ನಿಕ್ಕಿದರು. 'ಬೆಕ್ಕಿಗೆ ಆಟ; ಇಲಿಗೆ ಪ್ರಾಣಸಂಕಟ' ಎಂಬ ನಾಣ್ಣುಡಿಯು ಎಂದಿಗೆ ಸುಳ್ಳಾದೀತು? ಅಕಟಕಟಾ! ಇದೇನು ಅವರ ಕಲ್ಲೆದೆಯ ಕನಸೋ! ಮಲ್ಲಮ್ಮನ ಬಗ್ಗೆ ಕುನಸೋ!! ಯಾರಿಗೆ ಗೊತ್ತು!!! ವಾಚಕರೇ! ಆ ಬಡಪ್ರಾಣಿ ಜಂಗಮನಿಗೆ ಅದೆಷ್ಟು ತಾಪವಾಗಿರಬಹುದು! ಅವನು ತೇಕುತ್ತ ನೆರಳುತ್ತ, ಏನೇನೋ ಒಟಗುಡುತ್ತಾ ಅದೆಲ್ಲಿಗೋ ಹೊರಟನು.

ಲೆಕ್ಕಿಲ್ಲದಷ್ಟು ಎಡತು-ತೊಡರು ಬಂದರೂ, ಹಿಡಿದ ವ್ರತವನ್ನು ಕೆಡಿಸಿಕೊಳ್ಳದಿರುವದೇ ಹಿರಿಯತನದ ಹೆಗ್ಗುರುತು. ಸುಶೀಲೆಯಾದ ಮಲ್ಲಮ್ಮನು ಮಲ್ಲಿಕಾರ್ಜುನನಿಗೆ ಸಲ್ಲಿಸದೆ, ಒಂದು ಹನಿ ನೀರು ಸಹ ಬಾಯಲ್ಲಿ ಹಾಕಿಕೊಳ್ಳುತ್ತಿದ್ದಿಲ್ಲ. ಅಂದರೆ, ಜಂಗಮಾರ್ಪಣವಾದ ಮೇಲೆಯೇ ಮಿಕ್ಕ ಪ್ರಸಾದವನ್ನು ಸ್ವೀಕರಿಸುತ್ತಿದ್ದಳು. ಹಸಿವೆ-ನೀರಡಿಕೆಗಳ ಪ್ರಶ್ನೆಯು ಒತ್ತಟ್ಟಿಗುಳಿಯಲಿ. ಒಂದೊಂದು ವೇಳೆ ಅವಳು ತನ್ನ ಗುರುಮೂರ್ತಿಯು ನೆನಹಿನಲ್ಲಿ ಮುಳುಗಿದಳೆಂದರೆ ಮೈಮೇಲಿನ ಪರಿವೆಯೇ ಹಾರುತ್ತಿತ್ತು. ಅಂಥವಳಿಗೂ ಒಮ್ಮೆ ಪರೀಕ್ಷೆಯ ಕಾಲವು ಪ್ರಾಪ್ತವಾಗಬೇಕೆ? ಆಶ್ಚರ್ಯ! ಅತ್ಯಾಶ್ಚರ್ಯ!! ಅವಳು ಮಲ್ಲಿನಾಥನ ಹಾದಿಯನ್ನು ಎಷ್ಟುಹೊತ್ತು ನೋಡಿದರೂ ಅವನೇನು ಬರಲಿಲ್ಲ. ಇಲ್ಲಿಯೇ ಎಲ್ಲಿಯಾದರೂ ಇರಬಹುದೆಂದೆಣಿಸಿ, ವನವನೆಲ್ಲ ಹುಡುಕಿದಳು. ಆದರೂ ಅವನು ಕಣ್ಣಿಗೆ ಬೀಳಲಿಲ್ಲ ಅವಳು ಬಹಳವಾಗಿ ಚಿಂತಿಸುತ್ತಾ ಒಂದು ಗಿಡದ ಕೆಳಗೆ ಕುಳಿತಾಗ ಯಾರೋ ದೂರದಲ್ಲಿ ಅಳುತ್ತಿರುವಂತೆ ಭಾಸವಾಯಿತು; ಕನಿಕರಬಟ್ಟು ಕಿವಿಗೊಟ್ಟು ಕೇಳಿದಳು; ದನಿಯು ಗುರುತು ಹತ್ತಿತೋ ಏನೋ! ಅವಳು ಆತುರದಿಂದ ಅತ್ತ ಧಾವಿಸಿದಳು; ಧ್ಯಾನಮೂರ್ತಿಯಾದ ಮಲ್ಲಿಕಾರ್ಜುನನು ಕೈಗೆ ಸಿಕ್ಕನು. ಅವಳನ್ನು ಕಂಡಬಳಿಕಂತೂ ಅವನ ಅರ್ಭಾಟವು ಅಳತೆಯಿಲ್ಲದಾಯಿತು. ಒಮ್ಮೆ ಅವನು ಕೋಪಾತಿಶಯದಿಂದ ಕಣ್ಣಿಡಿಗಳನ್ನು ಸುರಿಸಿದರೆ, ಮತ್ತೊಮ್ಮೆ "ಅಯ್ಯೋ! ನೋವು ತಾಳಲಾರೆ! ಆ ನೀಚರಿಗೆ ಭಯಂಕರವಾದ ಶಾಪ ಕೊಡುವೆ!!" ಎಂದು ಕೆಟ್ಟದನಿಯಿಂದ ಚೀರುತ್ತಾ ಭೂಮಿಗೆ ಬಿದ್ದುಹೊರಳಾಡುತ್ತಿದ್ದನು. "ತಂದೆ! ಯಾರಿಗೆ ಶಾಪ ಕೊಡುವೆನೆಂದೆ? ಏನಿದು? ತಾತಾ! ಮೈತುಂಬ ಬಾರು ಮೂಡಿರುವವೇಕೆ? ನನ್ನಯ್ಯಾ! ನಿನಗೆ ಇಷ್ಟೊಂದು ಕಷ್ಟಕೊಟ್ಟವರಾರು? ಬಾ. ಸ್ವಾಮಿ! ಯೋಗ್ಯ ಉಪಚಾರ ಮಾಡಿ ಬೇಗನೆ ಗುಣಪಡಿಸುವೆ! ನನ್ನಪ್ಪಾ! ನಿನಗಿನ್ನೂ ಹಸಿವೆಯಾಗಿಲ್ಲವೇ?" ಎಂದು ಮಲ್ಲಮ್ಮನು ಪ್ರೇಮಪೂರ್ವಕವಾಗಿ ಮಾತಾಡಿಸಿದಳು. ಆದರೆ ಮಲ್ಲಿಕಾರ್ಜುನನು, ಅವಳ ಅತ್ತೆ-ನಗೆಣ್ಣೆಯರು ತನಗೆ ಮಾಡಿದ ಅನ್ಯಾಯವನ್ನು ಅವಳಿಗೆ ಹೇಳಿ ಕ್ಷಣಕ್ಷಣಕ್ಕೆ ವಿಷಾದಕೋಪಗಳನ್ನು ವ್ಯಕ್ತಮಾಡಿದನೇ ಹೊರತು, ಅಂತರಂಗದ ಸಂತಸವನ್ನು ತೋರ್ಪಡಿಸಲಿಲ್ಲ. ಮಲ್ಲಮ್ಮನು ಕೈಜೋಡಿಸಿ, "ಸೈರಣೆ! ಸೈರಣೆ! ಪೂಜ್ಯದೇವಾ! ದಯವಿಟ್ಟು, ಅವರು ತಿಳಿಯದೆ ಮಾಡಿದ ತಪ್ಪನ್ನು ಹೊಟ್ಟೆಯಲ್ಲಿಟ್ಟುಕೊಳ್ಳಬೇಡ!! ಅದು ನನ್ನ ತಪ್ಪೆಂದೇ ತಿಳಿ. ನನ್ನವರಿಗೆ ಶಪಿಸಬೇಡ!" ಎಂದು ನಾನಾವಿಧವಾಗಿ ಬೇಡಿಕೊಂಡಳು; ವ್ಯರ್ಥವಾಯಿತು. ಆದದ್ದಾಗಲಿಯೆಂದು ಅವಳು ಅವನನ್ನು ಗುಡಿಸಲಿಗೆ ಕರೆದೊಯ್ದು ಪ್ರೀತಿಯಿಂದ ಉಪಚರಿಸಿ, ಊಟಮಾಡಿಸಿದಳು.

ದುಷ್ಕರದುರಾಲೋಚನೆಗಳು ಇಷ್ಟಕ್ಕೇ ಕೊನೆಗಾಣುತ್ತವೆಂದು ತರ್ಕಿಸುವದು ಮೂರ್ಖತನವೇ ಸರಿ. ಅತ್ತ ಅತ್ತೆ-ಸೊಸೆಯಂದಿರು ಸುಮ್ಮನೆ

ಕೂಡ್ರಲಿಲ್ಲ, ಮಹಾ ಶರಣೆ-ಮಲ್ಲಮ್ಮನ ಮೇಲೆ-ಪಾತಿವ್ರತ್ಯದ ಪುತ್ಥಳಿಯ ಮೇಲೆ-ಅಲ್ಲಲ್ಲ-ತಮಗೇನೇ ಹತ್ತಿಹೊಂದಿರುವವಳ ಮೇಲೆ-ಹಾದರದ ದೋಷ ವನ್ನು ಹೊರಿಸುವದಕ್ಕೂ ಕೂಡ ಅವರು ಹಿಂಜರಿಯಲಿಲ್ಲ. ಒಂದು ದಿವಸ ಅತ್ತೆಯು ಭರಮರಡ್ಡಿಯನ್ನು ಕರೆದು ಅವನಿಗೆ “ ಮಗೂ ! ನಮ್ಮ ಮನೆತನದ ಮರ್ಯಾ ದೆಯು ಮಣ್ಣುಗೂಡಿತು. ಬುದ್ಧಿಗೇಡಿ ! ಇನ್ನೂ ಕಣ್ಣುಮುಚ್ಚಿಕೊಂಡು ತಣ್ಣಗೆ ಕುಳಿತಿರುವಿಯಾ ? ನಿನ್ನ ಹೆಂಡತಿಯ ಬಣ್ಣವು ತಿಳಿದಿಲ್ಲವೋ; ನಿನ್ನ ಮಲ್ಲಿಯು ಹೊರಗೆ ಶಿವಶರಣೆ, ಒಳಗೆ ವ್ಯಭಿಚಾರಿಣಿ ! ಕಾಡಿನೊಳಗಿರುವ ಪುಂಡ ಜಂಗ ಮನಾದ ಮಲ್ಲಯ್ಯನನ್ನು ಕೂಡಿಕೊಂಡು ಬಾಳುವೆ ಮಾಡುತ್ತಿರುವಳು ಬಾಳುವೆ! ನಾಚಿಕೆಗೇಡಿ ! ಹೋಗು ! ಅವಳನ್ನೂ ಆ ಅಯ್ಯನನ್ನೂ ಕಡಿದು ಚೂರು ಚೂರುಮಾಡಿ ಬಾ ! ” ಎಂದು ಮನಸ್ಸಿಗೆ ನಡುವಂತೆ ನುಡಿದಳು. ಆದೇಕೋ ! ಭರಮರಡ್ಡಿಗೆ ತಾಯಿಯ ಮಾತಿನಮೇಲೆ ಪೂರ್ವ ವಿಶ್ವಾಸವು ಹುಟ್ಟಲಿಲ್ಲ. ಅದೇ ಕಾಲಕ್ಕೆ ಹಿರಿಯ ಸೊಸೆಯರ ಆಗಮನವಾಯ್ತು. ಹೇಳುವದೇನಿದೆ ? ಉರಿಯಲ್ಲಿ ಸೌದೆ ಬಿದ್ದಂತೆಯೆ. ಒಬ್ಬಳು “ ಮೈದುನರೇ ! ನನ್ನಾಣೆ ! ನಮ್ಮಪ್ಪನಾಣೆ ! ಅತ್ತೆಯವರ ಮಾತು ಸತ್ಯ ಸತ್ಯ ! ” ಎಂದೆನ್ನುವಷ್ಟರೊಳಗೆ ಇನ್ನೊಬ್ಬಳು ನಡುವೆ ಬಾಯಿ ಹಾಕಿ, “ ನನ್ನ ಗಂಡನಾಣೆ ! ಮಾವನವರಾಣೆ ! ದೇವರಾಣೆಯಾಗಿ ಹೇಳುತ್ತೇನೆ, ಮೈದುನರೇ ! ಮಲ್ಲವ್ವನು ಹಾದರಗಿತ್ತಿಯು !! ” ಎಂದು ಥಟ್ಟನೆ ಅನುಮೋದಿಸಿದಳು. ಇದೆಲ್ಲವನ್ನು ಕೇಳಿ ಭರಮರಡ್ಡಿಯು ತುಂಬ ಹುಚ್ಚನಾದನು ! ಅವನು ಹದನವಾದ ಕೊಡಲಿಯನ್ನು ಹೆಗಲಮೇಲೆ ಹೊತ್ತು ರುದ್ರಾವತಾರ ತಳೆದು, ಅರಣ್ಯಮಾರ್ಗವಾಗಿ ವಿಚಾರತರಂಗಗಳಲ್ಲಿ ತೇಲಾಡುತ್ತಾ ನಡೆದನು. ಹೇಗಿದೆ ? ಕುಹಕ ಹೆಂಗಸರ ಕುತಂತ್ರ !

ವೃಥಾಪವಾದಗಳು ಮಹಾತ್ಮರಿಗೆ ಅಂಟಿ, ಕಾಡಿ ಕಾಡಿ ಕಟ್ಟ ಕಡೆಗೆ ಬಿಟ್ಟುಹೋಗುವಾಗ ಅವರ ಮೇಲ್ಮೆಯನ್ನು ಬೈಲಿಗೆ ತರದೆ ಬಿಡುವದಿಲ್ಲ. ಆಚೆಗೆ ಭರಮರಡ್ಡಿಯು ಮಲ್ಲಮ್ಮನ ಗುಡಿಸಿಲದ ತೀರ ಸನಿಹಕ್ಕೆ ಬಂದನು. ಅಲ್ಲಿ ಯಾರೋ ಇಬ್ಬರು ಸಂಭಾಷಣೆಮಾಡುತ್ತಿದ್ದುದು ಅವನಿಗೆ ಕಂಡುಬಂತು; ಗುಡಿಸಿಲದ ಮರೆಗೆ ಅಡಗಿಕೊಂಡ. ಮಲ್ಲಿಕಾರ್ಜುನನ ಸೇನೆಯಲ್ಲಿ ತತ್ಪರಳಾಗಿದ್ದ ಮಲ್ಲಮಾಂಬೆಯು ತನ್ನವರಿಗೆ ಶಾಪಕೊಡಬೇಡವೆಂದು ಅಂಗಲಾಚಿಬೇಡಿಕೊ ಳ್ಳುತ್ತಿದ್ದಳು; ಅವನ ಅನಂತ ನಾಮಗಳನ್ನು ಶ್ರದ್ಧೆಯಿಂದ ಉಚ್ಚರಿಸುತ್ತಿದ್ದಳು. ಅದನ್ನೆಲ್ಲ ಆಲಿಸಿದ ಭರಮರಡ್ಡಿಗೆ ಏನೂ ತೋಚದಾಯಿತು; ಆದರೂ ತನ್ನ ಹೆಂಡತಿಯು ನಿರ್ದೋಷಿಯೆಂಬ ಮಾತು ಅವನಿಗೆ ಮನದಟ್ಟಾಗಿರಲಿಲ್ಲ. ಈಚೆಗೆ ಮಲ್ಲಿಕಾರ್ಜುನನಾದರೋ ತನ್ನ ಜ್ಞಾನದೃಷ್ಟಿಯಿಂದ ಭರಮರಡ್ಡಿಯು ಬಂದ ದ್ದನ್ನು ತಿಳಿದು, ಮಲ್ಲಮ್ಮ ತಾಯಿಗೆ ಅವಳ ಅತ್ತೆ-ನೆಗೆಣ್ಣೆಯರ ಕಾರಸ್ಥಾನದ ಸಂಗತಿಯನ್ನು ಸವಿಸ್ತಾರವಾಗಿ ಅರುಹುತ್ತಲೆ, “ ಆ ಅಧಮರಿಗೆ ರೋಗಾದಿಗಳು

ಸಂಭವಿಸಲಿ ! ಐಶ್ವರ್ಯವು ಸುಟ್ಟುಬೂದಿಯಾಗಲಿ !! ಕುಲವು ಹಾಳಾಗಲಿ !!! ಎಂದು ಕೋಪೋದ್ರೇಕದಿಂದ ಶಾಪ ಕೊಟ್ಟನು. ಇದೋ ! ಭರಮರಡ್ಡಿಯು ಬೆಪ್ಪಾಗಿ ಬೆದರಿ ಬಿದ್ದನು. ಅವನು ಹಾಗೆಯೆ ಸಪ್ಪುಳಮಾಡದೆ ಬಂದು, ಗುಡಿಸಿಲೊಳಗೆ ಇಣಿಕಿ ಹಾಕಿದ; ಎತ್ತ ನೋಡಿದತ್ತ ದಿವ್ಯ ತೇಜಸ್ಸೇ ತೇಜಸ್ಸು ! ಝುಗ್ಗನೆ ಬೆಳಗಿ, ಭಗ್ಗನೆ ಅವನ ಕಣ್ಣು ಕುಕ್ಕಿಸಿತು. ಮಲ್ಲಿಕಾರ್ಜುನನು ಮಾಯವಾಗಿದ್ದನು. ನಮ್ಮ ಭರಮರಡ್ಡಿಯು ಮತ್ತೆ ಮತ್ತೆ ದಿಟ್ಟಿಸಿನೋಡಿದ; ಎದುರಿಗೆ ಕರಜೋಡಿಸಿ, ಶಿರಬಾಗಿಸಿ ನಿಂತ ಮಲ್ಲಮ್ಮನ ಸುಂದರ ಮೂರ್ತಿಯು ಮಿನುಗುತ್ತಿತ್ತು. ಅಂಜುತ್ತ ಅಳ್ಕುತ್ತಯಿಂದ ಮಾತನಾಡಿಸಿದ; ಅವಳ ಸದ್ಬೋಧಾಮೃತವನ್ನು ಸುರಿದು, ಆನಂದ ಬಾಷ್ಪಗಳನ್ನುದುರಿಸಿದ. ಇದಲ್ಲದೆ ಅವಳ ಹೇಳಿಕೆಯಂತೆ ನಿಶ್ಚಲಮನಸ್ಸಿನಿಂದ ಮಲ್ಲಿನಾಥನ ಸ್ಮರಣೆಗೈದ. ಆಹಾ ! ಮಲ್ಲಿಕಾರ್ಜುನನು ಪ್ರಸನ್ನನಾಗಿ ಆ ದಂಪತಿಗಳ ತಲೆಯಮೇಲೆ ವರದ ಹಸ್ತಗಳನ್ನಿರಿಸಿ, ಪುನಃ ಅಂತರ್ಧಾನನಾದನು. ತರುವಾಯ ಭರಮರಡ್ಡಿಯು ತಾನು ತಾಯಿ-ಅತ್ತಿಗೆಯರನ್ನು ಗೊತ್ತಿಗೆಹಚ್ಚಿ, ಬೇಗನೇ ತಿರುಗಿ ಬರುವೆನೆಂದು ಹೆಂಡತಿಗೆ ಹೇಳಿ ತನ್ನ ಊರ ಹಾದೀ ಹಿಡಿದನು. ಭಾಪು ! ಭಾಪು ! ಭರಮರಡ್ಡಿ ! ಚಿನ್ನದ ಕಡ್ಡಿ ! ಪುಣ್ಯದ ಗಡ್ಡಿ !! ನೀನೇ ಅಲ್ಲವೇ ? ಮಹಾತ್ಮಳಾದ ಮಲ್ಲಮ್ಮನ ಸೌಭಾಗ್ಯದ ಬೊಡ್ಡಿ !!!

ಪರಮಾತ್ಮನ ಆಟವು ಅದಾರಿಗೆ ತಿಳಿಯುವದು ! ಕಣ್ಮುಚ್ಚಿ ಕಣ್ದೆರೆಯುವದರೊಳಗೆ ಹೇಮರಡ್ಡಿಯ ಸಕಲ ಸಂಪತ್ತು ಸಮೂಲ ನಾಶವಾಯಿತಲ್ಲ ! ಮನೆಮಂದಿಗೆಲ್ಲ ಸಹಿಸಲಸಾಧ್ಯವಾದ ಬೇನೆಗಳು ಮುತ್ತಿದವು !! ಮನೆ ಸುಟ್ಟುಹೋಯಿತು !!! ಸರ್ವರೂ ಗೊಳೋ ಎಂದು ಅಳುತ್ತ, ಬಿಕ್ಕುತ್ತಾ, ಒದ್ದಾಡುತ್ತಿದ್ದರು. ಸ್ವಲ್ಪು ವೇಳೆ ತಡದಿದ್ದರೆ, ನಮ್ಮ ಭರಮರಡ್ಡಿಯು ಅವರನ್ನು ಕೊಲ್ಲುವವನೆ ! ಆದರೆ ಅವನ ತಂದೆ-ಹೇಮರಡ್ಡಿಯು ಉಪಾಯದಿಂದ ಬಿಡಿಸಿಕೊಂಡು ತನ್ನ ಹೆಂಡತಿಗೂ-ಸೊಸೆಯರಿಗೂ ಒಳಿತಾಗಿ ಥೀ ಥೂ ಹಾಕಿದನು; ಸಾಧ್ವೀ ಶಿರೋಮಣಿಯಾದ ಆದರ್ಶ ಮಹಿಳಾರತ್ನವಾದ-ಮಲ್ಲಮ್ಮನಿಗೆ ಸುಮ್ಮ ಸುಮ್ಮನೆ ಪೀಡಿಸಿ-ಕಾಡಿಸಿದ ಪಾಪವೇ ತಮ್ಮನ್ನು ತಿನ್ನುತ್ತಿದೆಯೆಂಬುದನ್ನೂ, ಅವಳಿಗೆ ಮೊರೆಹೊಕ್ಕು, ಕ್ಷಮೆಯನ್ನು, ಯಾಚಿಸದ ವಿನಾ ತಮಗೆ ಬೇರೇ ಗತಿಯಿಲ್ಲವೆಂಬುದನ್ನೂ ಅವನು ಅವರಿಗೆ ವಿವರಿಸಿದ. ಮತ್ತು ನಮ್ಮ ಭರಮರಡ್ಡಿಯು ಅರಣ್ಯದಲ್ಲಿ ನಡೆದ ವೃತ್ತಾಂತವನ್ನು ಒಳ್ಳೇ ಉತ್ಸಾಹ ಭರಿತನಾಗಿ ಅವರೆಲ್ಲರಮುಂದೆ ಉಸುರಿದ. ಎಷ್ಟೆಂದರೂ ಬಿಸಿಯಾಗದೆ ಬೆಣ್ಣೆ ಕರುಗುವದಿಲ್ಲ; ನೋಡಿ! ಅತ್ತೆ ಸೊಸೆಯರ ಗೋಳಾಟವು ನಿಜವಾಗಿ ಚಿಂತಾಜನಕವಾಗಿತ್ತು. ಎಲ್ಲರ ಮುಖದ ಮೇಲೆ ಪಶ್ಚಾತ್ತಾಪಸೂಚಕ ರೇಖೆಗಳು ಒಡೆದು ಕಾಣುತ್ತಿದ್ದವು. ಪ್ರಾಯಶ್ಚಿತ್ತದಿಂದ ಪರಿಶುದ್ಧರಾದವರಿಗೂ ಸುಖತಟ್ಟುವದೆಂದು ನಿಮ್ಮ ನಿದರ್ಶನಕ್ಕೆ ಬರಬೇಕೇನು? ಕೊಂಚತಾಳಿ !

ಆ ಮೇಲೆ ಹೇಮರಡ್ಡಿಯು ಬಳಲಿ ಬೆಂಡಾದ ತನ್ನ ಬಳಗದೊಂದಿಗೆ ಮಲ್ಲಮ್ಮನ ಪರ್ಣಶಾಲೆಗೆ ಹೋಗಿ, ಸಾಷ್ಟಾಂಗವೆರಗಿ, ತಮ್ಮನ್ನು ಕಾಪಾಡಬೇಕೆಂದ ಪ್ರಾರ್ಥಿಸಿಕೊಂಡನು. ಆವಾಗ ಮಲ್ಲಮಾಂಬೆಯು ತನ್ನ ಆರಾಧ್ಯ ದೇವನಾದ ಮಲ್ಲಿಕಾರ್ಜುನನನ್ನು ಧ್ಯಾನಿಸಿ, ಅವರ ದೇಹಕ್ಕೆ ಭಸ್ಮವನ್ನು ಲೇಪಿಸಿ, ಅವರನ್ನೊಮ್ಮೆ ಕೃಪಾಕಟಾಕ್ಷದಿಂದ ಈಕ್ಷಿಸಿದಳು. ಅರನಿಮಿಷದಲ್ಲಿ ಎಲ್ಲರೂ ಮುಂಚಿನಂತೆ ಸದೃಢಕಾಯರಾಗಿ ಎದ್ದು, ಆವಳ ಪಾದಕ್ಕೆ ಬಿದ್ದು, ಸ್ತೋತ್ರ ಮಾಡತೊಡಗಿದರು. ಮುಂದೆ ಮಲ್ಲಮ್ಮನು ಮಾವನ ಬಯಕೆಯಂತೆ ಅಲ್ಲಿಯೇ ಹತ್ತರದಲ್ಲಿದ್ದ ಲಿಂಗದ ಮುಖಾಂತರವಾಗಿ ಎಲ್ಲರಿಗೂ ಮಲ್ಲಿಕಾರ್ಜುನನ ಪವಿತ್ರ ದರ್ಶನ ಮಾಡಿಸಿದಳು; ಅನೇಕ ವರಗಳನ್ನು ಪಡೆದಳು. ಆ ಗುರುವಿಗೋಸುಗ ಒಂದು ಭವ್ಯ ದೇವಾಲಯವನ್ನು ಕಟ್ಟಿಸಿ, ಪ್ರತಿವರ್ಷ ವಿಜೃಂಭಣೆಯಿಂದ ಅವನ ಜಾತ್ರೆಯಾಗುವಂತೆ ಏರ್ಪಡಿಸಿದಳು; ಒಟ್ಟಾರೆ, ಅವಳು ವಿಧವೆಯರನ್ನೂ, ಪತಿತರನ್ನೂ, ಅನಾಥರನ್ನೂ ಮತ್ತು ದೀನರನ್ನೂ ಎತ್ತಿಹಿಡಿದು ಸನ್ಮಾರ್ಗಕ್ಕೆ ಹಚ್ಚಿ ಸಲಹಿದಳು; ಪತಿಸೇವಾ ಪರಾಯಣೆಯಾಗಿ-ಸಮಾಜ ಕಾರ್ಯಧುರಂಧರೆಯಾಗಿ-ಶಿವಾನುಭವ ಶಾಸ್ತ್ರನಿಷ್ಣಾತೆಯಾಗಿ-ಹೆಚ್ಚೇನು ? ಮಹಾಮಹಿಮಳಾಗಿ ಕಡೆಗೆ ಲಿಂಗದಲ್ಲಿ ಬೆರೆದಳು. ವಾಹವ್ವಾ ! ಹೇಮರಡ್ಡಿ-ಭರಮರಡ್ಡಿ !! ನಿಮ್ಮ ಭಾಗ್ಯಕ್ಕೆ ಬೆಲೆಯೇ ! ಮಹಾಶರಣೆಯಾದ ಮಲ್ಲಮಾಂಬೆಯೇ ! ನಿನ್ನ ಅಡಿದಾವರೆಗಳಿಗೆ ಅಸಂಖ್ಯಕೋಟಿ ವಂದನೆಗಳು !!

ಯಾವಳ ಲೀಲೆಯಿಂದ ಹೊಲದೊಳಗೆ ಬಿತ್ತಿದ ಮಳಲು ಕೂಡ ಚಿಗಿತು ಬೆಳೆಯಾಗಿ ನಳನಳಿಸಿತೋ, ಯಾವಳ ಸತ್ವದಿಂದ ಕಿಟ್ಟದ ಸೆಗಣಿಯೂ, ಕಾಡ ಕವಡೀಕಾಯಿಗಳೂ ಸಹ ಬಂಗಾರವಾದುವೋ, ಯಾವಳ ಮಹಿಮೆಯಿಂದ ಉತ್ತುಂಗ ಭೂಪಾಲನ ಹಿಂಗಿದ ಕಣ್ಣುಗಳು ಮತ್ತೆ ಮೊದಲಿನಹಾಗೆ ಕಳೆಗೊಂಡವೊ ? ಯಾವಳ ಪ್ರಸಾದವಾಣಿಯಿಂದ ಹೇಮರಡ್ಡಿಯ ಗತವೈಭವವು ಕ್ಷಣದೊಳಗೆ ಮರಳಿ ಕೈವಶವಾಯಿತೋ, ಯಾವಳ ಮೂಗುತಿಯ ಮಹತ್ವದಿಂದ ದುರಾಚಾರಿಯಾದ ವೇಮರಡ್ಡಿಗೆ ಜ್ಞಾನೋದಯವಾಯಿತೋ ಮತ್ತು ಯಾವಳ ಬಲದಿಂದ ರಡ್ಡಿಯ ವಂಶವು ಇಂದಿನತನಕ ಬಡತನದ ಬೇಗೆಯಿಂದ ದೂರಾಗಿರುವದೋ, ಅಂತಹ ಮಹಾ-ಶಿವಶರಣೆ-ಪಾತಿವ್ರತ್ಯದ ಖಣಿ-ಹೇಮರಡ್ಡಿ ಮಲ್ಲಮಾಂಬೆಯು ಸಕಲರಿಗೂ ಹಿತವನ್ನುಂಟುಮಾಡಲೆಂದು ಮನಃಪೂರ್ವಕವಾಗಿ ಹಾರೈಸುತ್ತೇವೆ.

ಹೇಮರಡ್ಡಿ ಮಲ್ಲಮ್ಮನ ಕಥೆಯು ಮುಗಿದುದು.

## ವೈರಾಗ್ಯಶಾಲಿನಿಯಾದ ಅಕ್ಕಮಹಾದೇವಿಯ ಕತೆ.

ಪುಣ್ಯಭೂಮಿಯೆನಿಸಿಕೊಂಡ ಕರ್ನಾಟಕದಲ್ಲಿ ಜಗಜ್ಜ್ಯೋತಿಯಾದ ಶ್ರೀ ಬಸವ ಮಹಾನುಭಾವನು, ಬಿಜ್ಜಳರಾಜನ ಹಿರಿಯ ಮಂತ್ರಿಯಾಗಿ ಮೆರೆದು ಹೋದ ಕಾಲಕ್ಕೆ, ಉಡುತಡೀ ಪಟ್ಟಣದೊಳಗೆ ನಿರ್ಮಲನೆಂಬ ಜಂಗಮನಿದ್ದನು. ಅವನ ಅಚ್ಚುಮೆಚ್ಚಿನ ಹೆಂಡತಿಯು ಹೆಸರು ಸುಮತಿ. ಗಂಡನು ಬಹು ನಿರ್ಮಲ ಮನಸ್ಸಿನವನು; ಹೆಂಡತಿಯು ಒಳ್ಳೇ ಮತಿವಂತೆಯು. ಅವರ ಹೊಂದಿಕೆಯು ಸವಿಗಬ್ಬಿನ ಮೇಲೆ ಜೇನು ಇಟ್ಟಂತೆ! ದೇಹಗಳೇನು ಎರಡು; ಮಾತ್ರ ಅವರ ಹೃದಯವು ಒಂದು. ಆದರೆ, ಆ ದಂಪತಿಗಳ ಕಟ್ಟು-ಮಟ್ಟುಗಳಲ್ಲಿ, ಗುಟ್ಟು-ಗುರಿಗಳಲ್ಲಿ ಎಷ್ಟೆಷ್ಟೂ ಹೆಚ್ಚು ಕಡಿಮೆಯಿದ್ದಿಲ್ಲ. ಅವರಿಬ್ಬರ ನಡೆ-ನುಡಿ-ನಂಬಿಗೆಗಳು ಮಾದರಿಯವಾಗಿಯೂ, ಊಟ-ಅಡಿಗೆ-ತೊಡಿಗೆಗಳು ಸಾದಾತೆರನಾಗಿಯೂ ಇದ್ದವು. ಶಿವಧ್ಯಾನ, ಶಿವಾರ್ಚನೆ, ಶಿವಶರಣಸೇವೆ, ಶಿವಾನುಭವಶ್ರವಣ ಮುಂತಾದವುಗಳೇ ಅವರ ಪ್ರೀತಿಯ ವಿಷಯಗಳು; ಅಲ್ಲದೆ ಅವೇ ನಿತ್ಯಕಾರ್ಯಗಳು. ಬಹಳವೇನು ? ಅವರ ಇಡೀ ಬಾಳುವೆಯು ಕಾಯಕಕ್ಕೆ ಮೀಸಲಾಗಿಯೂ, ಭಕ್ತಿಗೆ ಮುಡುಪಾಗಿಯೂ ಇತ್ತೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಮನುಷ್ಯನು ನಿರಪೇಕ್ಷ ಬುದ್ಧಿಯಿಂದ ತನ್ನ ಕರ್ತವ್ಯವನ್ನು ಮಾಡುತ್ತ ಹೋದರೆ, ಒಂದುಸಲವಾದರೂ ದಯಾಘನನಾದ ಪರಮೇಶ್ವರನ ಒಲಮೆಯ ನೋಟವು ಅವನಮೇಲೆ ಬಿದ್ದೇತೀರುವದು. ಸುಮತಿ ನಿರ್ಮಲರಿಗೆ ಮಕ್ಕಳ ಕೊರತೆಯೇನೋ ಇತ್ತು; ಆದರೆ ಅವರು ಆ ಕೊರತೆಗಾಗಿ ಕೊರಗಲಿಲ್ಲ. ತಮ್ಮ ಕರ್ತವ್ಯ ಕರ್ಮವನ್ನು ಎಂದೂ ಮರೆಯಲಿಲ್ಲ. ಬಡತನವನ್ನು ಜರಿಯದೆ, ಇದ್ದುದರಲ್ಲಿಯೇ ತೃಪ್ತಿಹೊಂದುವದು ಅವರ ಹುಟ್ಟು ಸ್ವಭಾವ. ಕೆಲಕಾಲದ ನಂತರ ಸುಮತಿಯ ಹೊಟ್ಟೆಯಲ್ಲೊಂದು ಹೆಣ್ಣು ಕೂಸು ಜನಿಸಿತು; ಮುದ್ದಾಗಿ ಬೆಳೆಯಹತ್ತಿತು. ಪಾರ್ವತಿಯ ಸಾತ್ವಿಕಕಳೆಯೂ, ಸರಸ್ವತಿಯ ಸಹಜ ಕೌಶಲ್ಯವೂ ಮತ್ತು ಲಕ್ಷ್ಮಿಯ ಸೌಂದರ್ಯಸಂಪತ್ತೂ ಒಟ್ಟುಗೂಡಿ ಒಂದು ಮೂರ್ತಿಯಾಗಿ ಭೂಮಿಗೆ ಇಳಿದು ಬಂದಿರುವದೇನೋ ಎಂಬ ವಿಚಾರವು ಆ ಬಾಲೆಯನ್ನು ನೋಡಿದವರ ತಲೆಯಲ್ಲಿ ಬಿಂಬಿಸದೆಬಿಡುತ್ತಿದ್ದಿಲ್ಲ. ಇಂತಹ ದೈವೀಶಕ್ತಿ ಸಂಪನ್ನಳಾದ ತರಳೆಯು ಮತ್ತಾರೂ ಅಲ್ಲ! ಈ ಸೀಳ್ಕತೆಯು ನಾಯಕಿಯಾದ ಅಕ್ಕಮಹಾದೇವಿಯು !!

ನಮ್ಮ ಅಕ್ಕಮಹಾದೇವಿಗೆ ಸುಮತಿಯು ಅತ್ಯುತ್ತಮ ರೀತಿಯಿಂದ ಗೃಹಶಿಕ್ಷಣವನ್ನು ಕೊಟ್ಟಳು. ಮಹಾದೇವಿಯು ಓದುಬರಹಗಳನ್ನು ಮನೆಯಲ್ಲಿಯೇ ಕಲಿತು, ವೀರಶೈವ ಧರ್ಮಶಾಸ್ತ್ರಗಳನ್ನೆಲ್ಲ ಸೂಕ್ಷ್ಮವಾಗಿ ಅಭ್ಯಾಸಿಸಿ ಚಿಕ್ಕ ವಯಸ್ಸಿನಲ್ಲಿಯೇ ಅಸಾಧಾರಣವಾದ ಪಾಂಡಿತ್ಯಾನುಭವಗಳನ್ನು ಸಂಪಾದಿಸಿದಳು.

ಅವಳು ಕನಸು-ಮನಸಿನಲ್ಲಿ ಸಹ ವಸ್ತ್ರ-ಒಡವೆ, ಆಟನೋಟಗಳಿಗೆ ಆಶಿಸಲಿಲ್ಲ; ಬೆಡಗು-ಬಿನ್ನಾಣಗಳಿಗೆ ಎಡೆಗೊಡಲಿಲ್ಲ; ಸುಗಂಧದೆಣ್ಣೆ, ಕಾಡಿಗೆ ಮೊದಲಾದವುಗಳನ್ನು ಹಚ್ಚಲಿಲ್ಲ; ಹಚ್ಚೆಯನ್ನು ಚುಚ್ಚಿಸಲಿಲ್ಲ. ಪರರ ಮನಸ್ಸು ನೋಯಿಸಲಿಲ್ಲ; ಪಂಕ್ತಿಭೇದಮಾಡಲಿಲ್ಲ; ಹಿಗ್ಗು-ಕುಗ್ಗುಗಳಿಗೆ ಹಿಗ್ಗಿ-ಕುಗ್ಗಲಿಲ್ಲ; ತನ್ನ-ತಾಯಿ-ಗುರು-ಹಿರಿಯರ ವಚನವಮೀರಲಿಲ್ಲ; ಲಿಂಗಧಾರಿಗಳಲ್ಲಿ ಅಂತರವನ್ನೆಂದೂ ಕಲ್ಪಿಸಲಿಲ್ಲ; ಭಸಿತ-ರುದ್ರಾಕ್ಷಿ-ಶಿವಗ್ರಂಥಾದಿಗಳನ್ನು ಬಿಟ್ಟಿರಲಿಲ್ಲ; ಮತ್ತು ಇಷ್ಟಲಿಂಗದ ಹೊರತು ಇನ್ನಾವ ದೇವರನ್ನು ಪೂಜಿಸಲಿಲ್ಲ. ಹೀಗಿದ್ದ ನಮ್ಮ ಅಕ್ಕನ ಆದರ್ಶಪ್ರಾಯವಾದ ಆಚರಣೆಯನ್ನು ಕಣ್ಣಾರೆ ಕಂಡು, ಕಿವಿಯಾರೆ ಕೇಳಿ, ಸುತ್ತುಮುತ್ತಲಿನ ಜನರು, ಸಕ್ಕರೆಗೆ ಇರುವೆ ಮುತ್ತುವಂತೆ, ಅವಳಿದ್ದಲ್ಲಿಗೆ ಬಂದು ಬಂದು, ಅವಳಿಂದ ಪಂಚಾಚಾರ, ಷಟ್‌ಸ್ಥಲ, ಅಷ್ಟಾವರಣಗಳ ಮಹಿಮೆಯನ್ನೂ, ಶಿವಶರಣೆಯರ ಸತ್ಕಥೆಗಳನ್ನೂ ತಿಳಿದುಕೊಂಡು ತಲೆದೂಗಿ, ಶಿರಬಾಗಿಸಿ ಹೋಗುತ್ತಿದ್ದರು. ಅಹಾ! ಅಕ್ಕನ ಆತ್ಮಬಲವು ವರ್ಣನೀಯವಲ್ಲವೇ? ಆವಾಗ್ಗೆ ಅಕ್ಕನ ವಯಸ್ಸು ಇನ್ನೂ ಹದಿನೈದನ್ನು ದಾಟಿದ್ದಿಲ್ಲ.

ಒಂದು ದಿವಸ ಮುಂಜಾನೆ ಮಹಾದೇವಿಯಕ್ಕನು ಓರಿಗೆಯ ಗೆಳತಿಯರೊಂದಿಗೆ ತಮ್ಮ ಮಠದ ಸಮೀಪದಲ್ಲಿದ್ದ ಉಪವನಕ್ಕೆ ಹೋಗಿದ್ದಳು. ಪತ್ರಿಪುಷ್ಪಗಳನ್ನೆತ್ತಿಕೊಂಡು ಅವಳು ಸಖಿಯರ ಸಂಗಡ ಮನೆಗೆ ಬರುವಾಗ, ರಾಜಬೀದಿಯಲ್ಲಿ ಆ ನಗರದ ಜೈನರಾಜನಾದ ಕೌಶಿಕನ ಮೆರವಣಿಗೆಯು ಕಡುಸಡಗರದಿಂದ ಸಾಗಿತ್ತು. ಅಕಸ್ಮಾತ್, ಆ ಕೌಶಿಕನ ದೃಷ್ಟಿಯು ಮಹಾದೇವಿಯಮೇಲೆ ಬಿತ್ತು. ಇನ್ನೇನು? ಅವನು ಅವಳ ರೂಪಲಾವಣ್ಯಗಳಿಗೆ ಬಹಳೇ ಮುಗ್ಧನಾದ; ಅವನ ಹೃದಯದಲ್ಲಿ ವಿದ್ಯುಚ್ಛಕ್ತಿಯ ಸಂಚಾರವಾದಂತಾಯ್ತು; ಕಣ್ಣಿಗೆ ಕತ್ತಲೆ ಮುಸುಕಿತು; ಬಾಯಿಬಿಟ್ಟ; ಬೆರಗಾಗಿ ಬೊಟ್ಟುಕಚ್ಚಿದ; ಅವಳ ಚಲ್ವಿಕೆಯನ್ನು ಕ್ಷಣ ಕ್ಷಣಕ್ಕೆ ನೆನೆಸುತ್ತ, ಬಹಳವಾಗಿ ಬಣ್ಣಬಣ್ಣಿಸುತ್ತಾ, ಮೈಮೇಲೆ ಎಚ್ಚರವಿಲ್ಲದೆ, ಆ ಕಾಮುಕನು ಹೇಗೊ ತನ್ನ ಅರಮನೆಯನ್ನು ತಲ್ಪಿದನು. ಇತ್ತ ಅಕ್ಕನೂ, ಅವಳ ಸಹಚರಿಯರೂ ತಮ್ಮ ತಮ್ಮ ಮನೆಗೆ ತೆರಳಿದರು.

ಅತ್ತ ಭ್ರಮಿಷ್ಟನಾದ ಕೌಶಿಕನು ಮಹಾದೇವಿಯ ಮನೆಯ ಸಂಪೂರ್ಣ ಸಮಾಚಾರವನ್ನು ತೆಗೆದುಕೊಂಡನು; ಅವಳನ್ನು ತನ್ನ ಅರಮನೆಗೆ ಬರಮಾಡಿಕೊಳ್ಳಬೇಕೆಂದು ನಿರ್ಧರಿಸಿ; ಕೆಲವು ಚಾರರನ್ನೂ, ಪರಿಚಾರಿಕೆಯರನ್ನೂ ಕರಿಸಿ, ಮನೋಹರವಾದ ಮೇಣೆಯನ್ನು ತರಿಸಿ, ಅವರ ಕೈಯಲ್ಲಿ ಅನೇಕ ತರದ ಆಭರಣಗಳನ್ನೂ, ಬಗೆಬಗೆಯ ಸೀರೆ-ಕುಪ್ಪಸಗಳನ್ನೂ, ಹಲವು ಪ್ರಕಾರದ ಹಣ್ಣುಹಂಪಲುಗಳನ್ನೂ ಕೊಡಿಸಿ, ಅವರನ್ನೆಲ್ಲ ಅವಳ ಮನೆಗೆ ಅಟ್ಟಿದನು.

ಆ ದಾಸ ದಾಸಿಯರು ರಾಜಾಜ್ಞೆಯಂತೆ ಮಹದೇವಿಯಕ್ಕನ ಮನೆಯನ್ನು ಹೊಕ್ಕು, ಅವಳ ತಂದೆತಾಯಿಗಳ ಮುಂದೆ ಅರಸನು ಕಾಣಿಕೆಯಿತ್ತ, ಅಮೂಲ್ಯ

ವಸ್ತ್ರಾಭರಣಗಳನ್ನು ಸುರುವಿ, "ನಮ್ಮ ರಾಜನು, ನಿಮ್ಮ ಮಗಳ ಅಪಾರ ಸೌಂದರ್ಯಕ್ಕೆ ಮೆಚ್ಚಿ, ತಾನಾಗಿಯೇ ನಿಮ್ಮ ಅಳಿಯನಾಗಲು ಬಯಸಿದ್ದಾನೆ. ನಿಮ್ಮ ದೈವ ತೆರೆಯಿತು. ಬಡತನವು ಬಯಲಾಯ್ತು, ರಾಜ್ಯವೇ ನಿಮ್ಮ ಕೈಸೇರಿತು. ನೋಡಿರಿ! ಇಂತಹ ಸುಸಂಧಿಯನ್ನು ಕಳಕೊಳ್ಳಬೇಡಿರಿ. ಅರಸನ ಅಪ್ಪಣೆಯನ್ನು ಉಲ್ಲಂಘಿಸಬೇಡಿ! ಅರಸನ ಕೋಪದಲ್ಲಿ ಮರಣವುಂಟು" ಎಂದು ಮುಂತಾಗಿ ಒಮ್ಮೆ ಸವಿಸವಿ ಮಾಡಿಯುತ್ತಲೂ, ಮತ್ತೊಮ್ಮೆ ಇಲ್ಲದ ಬೆದರಿಕೆ ಹಾಕುತ್ತಲೂ ಸುಮತಿ ನಿರ್ಮಲರನ್ನು ಹುರುಪುಗೊಳಿಸಲೆತ್ನಿಸಿದರು. ಇಂತಹ ಮಾತುಗಳು ಶಿವಾಚಾರ ಪ್ರತಿಪನ್ನರಾದ ಆ ದಂಪತಿಗಳ ಮನಸ್ಸಿಗೆ ಬಾವವೇ? ಕ್ಷಣಿಕ ಸುಖಕ್ಕೆ ಮರುಳಾಗಿ ಅವರು ಮತಿಗೆಡಲಿಲ್ಲ. ರಾಜನಾದರೇನಾಯ್ತು? ಭವಿಯಾದ ಕೌಶಿಕನಿಗೆ ಶಿವಲಿಂಗ ಪ್ರೇಮಿಯಾದ ಮಹಾದೇವಿಯನ್ನು ಕೊಡಲಿಕ್ಕೆ ಅದೆಂದಿಗೆ ಒಪ್ಪಿಯ್ಯಾರು! ಅವರು ಮೌನವಾಗಿ ಕುಳಿತು ಬಿಟ್ಟರು. ಅದೇ ಕಾಲಕ್ಕೆ ಮನೆಗೆಲಸದಲ್ಲಿ ತತ್ಪರಳಾಗಿದ್ದ ಮಹಾದೇವಿಯು ಅದನ್ನೆಲ್ಲ ಕೇಳಿ ಚಕಿತಳಾಗಿ, ಭಯಪಡದೆ, ಮೆಲ್ಲನೆ ತಂದೆ ತಾಯಿಗಳೆದುರಿಗೆ ಬಂದು ನಿಂತಳು, ತಾಯಿಗೆ ಮಗಳ ಮುದ್ದು ಮೊಗವನ್ನು ಕಂಡಾಕ್ಷಣವೇ ದುಃಖವು ಒಟ್ಟರಿಸಿ ಬಂದು, ದೊಡ್ಡ ದನಿಯಿಂದ ಅತ್ತು. ಆವಳನ್ನಾಲಿಂಗಿಸಿ, ಮುದ್ದಿಟ್ಟು ಅವಳ ಮೇಲೆ ಕಂಬನಿಗರೆದಳು. ಆವಾಗ ಮಹಾದೇವಿಯು, "ನನ್ನ ಪ್ರಿಯ ತಾಯ್ತಂದೆಗಳೇ! ತಾಳಿ! ಅಪತ್ತು ಬಂದಾಗ ಅಳುಕುವದು ಶಿವಭಕ್ತರ ಲಕ್ಷಣವಲ್ಲ. ನಿಮಗೆ ದೇವರಲ್ಲಿ ವಿಶ್ವಾಸವಿಲ್ಲವೇ? ನಿಮಗೆ ಕಷ್ಟಕೊಡಲು ನಾನು ಹುಟ್ಟಿಲ್ಲ. ನನ್ನಾಣೆಯಾಗಿ ಶಿವಭಕ್ತಿಯ ಬಲವಿರುವತನಕ ಯಮನ ಅಂಜಿಕೆಯೂ ಸಹ ಇಲ್ಲ. ಎಂದು ಅವರನ್ನು ಸಮಾಧಾನ ಪಡಿಸಿ, ಬಂದ ದಾಸಿಯರಕಡೆಗೆ ತನ್ನ ಮೋರೆ ತಿರುವಿ. "ನಿಮ್ಮ ರಾಜನು ನನ್ನ ಇಚ್ಛೆಯಂತೆ ನಡೆದರೆ ನಾನೇ ಅವನೊಡನೆ ದುದುವೆಯಾಗುವೆನು" ಎಂದು ಗಾಂಭೀರ್ಯದಿಂದ ಅಂದಳು. ತಮ್ಮ ಕಾರ್ಯವು ಕೈಗೂಡಿತೆಂದು ಹರ್ಷಬಟ್ಟು ಆ ದಾಸದಾಸಿಯರು ಲಗುಬಗೆಯಿಂದ ಅರಸನಬಳಿಗೆ ಹೋಗಿ, ನಡೆದ ಸಂಗತಿಯನ್ನು ಅರಿಕೆ ಮಾಡಿಕೊಂಡರು. ಅಂದು ವಿಷಯಲಂಪಟನಾದ ಕೌಶಿಕನ ಆನಂದ ಸಾಗರವು ಉಕ್ಕೇರಿ, ಹೊರಚೆಲ್ಲಿರಬಹುದಲ್ಲವೇ? ಅವನು ನೆಟ್ಟಗೆ ಮಹಾದೇವಿಯ ಮನೆಗೇಬಂದ, ಅವಳು ಹೇಳಿದಂತೆ ಪ್ರತಿಜ್ಞೆಮಾಡಿದ. ಅವಳನ್ನು ಅರಮನೆಗೆ ಕರಕೊಂಡು ಬರಲಿಕ್ಕೆ, ಮನೋಹರೆಯೆಂಬ ತನ್ನ ದಾಶಿಯೋರ್ವಳನ್ನು ಅಲ್ಲಿಯೇ ಬಿಟ್ಟು, ತಾನು ಹಿಂತಿರುಗಿದ, ಓದುಗರೇ! ಸ್ತ್ರೀಯರಿಗೆ ಸೌಂದರ್ಯವೂ ಒಂದು ಸಂಕಟವಲ್ಲವೆ?

ನಮ್ಮ ಮಹಾದೇವಿಯಕ್ಕನು ಸ್ನಾನ ಶಿವಪೂಜಾದಿಗಳನ್ನು ತೀರಿಸಿಕೊಂಡು, ಅರಸನು ತಂದು ಕೊಟ್ಟ ಕುಪ್ಪಸ, ಪೀತಾಂಬರಗಳನ್ನುಟ್ಟು, ರತ್ನಾಭರಣಗಳಿಂದ ಭೂಷಿತಳಾಗಿ, ಹಸ್ತದಲ್ಲಿ ಸ್ವಲ್ಪ ಭಸ್ಮವನ್ನು ತಕ್ಕೊಂಡು, ಶಿವಧ್ಯಾನಗೈಯುತ್ತಾ,

ಮನೋಹರೆಯಕೂಡ ಅರಮನೆಗೆ ಬಂದಳು. ದಾಸಿಯು ಅರಸನ ಏಕಾಂತ ಸ್ಥಾನವಾದ ಚಂದ್ರಭವನವೆಂಬ ಮಹಾಲಿಗೆ ಅವಳನ್ನು ಕಳಿಸಿಹೋದಳು. ಮೊದಲೇ ಮಾರ್ಗನಿರೀಕ್ಷಣೆಯಲ್ಲಿದ್ದ ಕೌಶಿಕನು ಅಲ್ಲಿಗೆ ಬಂದೇ ಬಿಟ್ಟ, ಹಂಸ ತೂಲಿಕಾತಲ್ಪದಮೇಲೆ ಮಹಾದೇವಿಗೆ ಕೂಡ್ರಲಿಕ್ಕೆ-ಹೇಳಿ, ತಾನೊಂದು ಬೇರೆ ಆಸನದಲ್ಲಿ ಕುಳಿತು, ಮುಗುಳ್ನಗೆ ನಕ್ಕು, ಅವಳನ್ನೊಮ್ಮೆ ದಿಟ್ಟಿಸಿ ನೋಡಿ, "ಮೋಹನಾಂಗಿ! ನನ್ನ ಚಿಂತಾರತ್ನವೇ!! ಇಂದಿಗೆ ನನ್ನ ಜನ್ಮ ಸಾರ್ಥಕ ವಾಯ್ತು!!!"

"ಮಹಾರಾಜ! ಹಾಗೆ ಒಮ್ಮೆಲೇ ದುಡುಕಬೇಡ! ನಿನ್ನ ಪ್ರತಿಜ್ಞೆಯು ಸ್ಮರಣೆಯಲ್ಲಿದೆಯಷ್ಟೇ!!"

"ಇದೆ ನಿನ್ನ ಮನೋಗತವೇನು? ಬೇಗಹೇಳು!"

"ನೀನು ನನ್ನಂತೆ ಇಷ್ಟಲಿಂಗವನ್ನು, ಭಸ್ಮರುದ್ರಾಕ್ಷಿಗಳಳನ್ನು ಧರಿಸಿ, ಶುದ್ಧ ವೀರಶೈವನಾಗದವಿನಾ ನನ್ನನ್ನು ಮುಟ್ಟಲಿಕ್ಕೆ ತಕ್ಕವನಾಗಲಾರಿ!"

"ಏನು! ಕಾಮಭಕ್ತನಾದ ನಾನು ಶಿವಭಕ್ತನಾಗಬೇಕೆ? ಛೀ! ಎಂದಿಗೂ ಶಕ್ಯವಿಲ್ಲ. ಏನಂದೆ? ನಾನು ನಿನ್ನನ್ನು ಮುಟ್ಟಲಿಕ್ಕೆ ತಕ್ಕವನಾಗಲಾರೆನೆ? ಇಕೋ ನೋಡು! ಮುಟ್ಟುತ್ತೇನೆ" ಎಂದು ಮೇಲಕ್ಕೇಳಲು, ಮಹಾದೇವಿಯು, "ಅರಸಾ! ಪರಸ್ತ್ರೀಯರ ಮೇಲೆ ಕಣ್ಣಿಟ್ಟು ಕೇಡಿಗೀಡಾಗಬೇಡ. ರಾವಣ, ಕೀಚಕ, ದುಶ್ಯಾಸನ, ವಾಲಿ ಮೊದಲಾದ ಕಾಮಾಂಧರ ಗತಿಯು ಏನಾಯಿತು, ಗೊತ್ತಿಲ್ಲವೇ?" ಎಂದು ಎಷ್ಟು ತಿಳಿಹೇಳಿದರೂ ಕೌಶಿಕನಿಗೆ ಬುದ್ಧಿ ಬರಲಿಲ್ಲ. ಅವನು-ಕಾಮಾತುರನು ಬಲತ್ಕಾರದಿಂದ ಅವಳನ್ನು ಮುಟ್ಟಿದನು. ಕ್ಷಣಮಾತ್ರದಲ್ಲಿಯೇ ಬಗ್! ಭಗಲ್!! ಬುಗ್! ಭುಗಿಲ್!! ಎಂದು ಉರಿಯು ಕೌಶಿಕನನ್ನು ಮುತ್ತಿ ಸುಡತೊಡಗಿತು. ಕೂಡಲೇ ಅವನು "ಶಿವಶಿವಾ! ತಾಳಲಾರೆ! ಸರ್ವಥಾ ತಪ್ಪಾಯ್ತು! ಜನನೀ! ಅಕ್ಕಮಹಾದೇವಿ!! ಕ್ಷಮಿಸು ಕ್ಷಮಿಸು!!! ತಾಯೀ ರಕ್ಷಿಸು! ರಕ್ಷಿಸು!! ಎಂದು ಗೋಳಿಟ್ಟು ಅಕ್ಕನಿಗೆ ಸಾಷ್ಟಾಂಗವೆರಗಲು, ಶಿವಧ್ಯಾನದಲ್ಲಿದ್ದ ಮಹಾದೇವಿಯು ತನ್ನ ಕೈಯೊಳಗಿನ ವಿಭೂತಿಯನ್ನು ಪುಡಿ ಮಾಡಿ ಅವನಿಗೆಉಗ್ಗಿದಳು; ಆಗಲೇಉರಿಯೆಲ್ಲ ಮಾಯವಾಗಿಕೌಶಿಕನು ಆ ಘೋರ ಸಂಕಟದಿಂದ ಬಿಡುಗಡೆಯಾದನು. ಅಂತಃಶಕ್ತಿಯಿಂದ ಸ್ಫೂರ್ತಿಗೊಂಡ ನಮ್ಮ ಮಹಾದೇವಿಯಕ್ಕನು ತಾನುಟ್ಟ ಸೀರೆಯನ್ನು ಕಿತ್ತೊಗೆದು ತನ್ನಲ್ಲಿ ಗುಪ್ತವಾಗಿದ್ದ ನಿರ್ಮೋಹ ಸ್ಥಿತಿಯನ್ನು ದಿಗಂಬರೆಯಾಗಿ ವ್ಯಕ್ತಪಡಿಸಿದಳು. ಬಳಿಕ ಅವಳು ತಲೆಯನ್ನು ನಡುಗಿಸಿ ಕೂದಲುಗಳನ್ನೆಲ್ಲ ಮೈಮೇಲೆ ಹರಡಿಕೊಂಡು ಪ್ರಳಯ ಕಾಲದ ದೇವಿಯಂತೆ ನಿಂತುಕೊಂಡು, "ಛೀ ಮೂರ್ಖಾ! ಇದೆಯೋ ನಿನ್ನ ಪ್ರತಿಜ್ಞಾಪಾಲನವು!" ಎಂದು ನುಡಿದು ಹಾಗೆ ಹೊರ ಹೊರಟಳು.

ವಸ್ತ್ರಾಭರಣಗಳನ್ನು ಸುರುವಿ, "ನಮ್ಮ ರಾಜನು, ನಿಮ್ಮ ಮಗಳ ಅಪಾರ ಸೌಂದರ್ಯಕ್ಕೆ ಮೆಚ್ಚಿ, ತಾನಾಗಿಯೇ ನಿಮ್ಮ ಅಳಿಯನಾಗಲು ಬಯಸಿದ್ದಾನೆ. ನಿಮ್ಮ ದೈವ ತೆರೆಯಿತು. ಬಡತನವು ಬಯಲಾಯ್ತು, ರಾಜ್ಯವೇ ನಿಮ್ಮ ಕೈಸೇರಿತು. ನೋಡಿರಿ! ಇಂತಹ ಸುಸಂಧಿಯನ್ನು ಕಳಕೊಳ್ಳಬೇಡಿರಿ. ಅರಸನ ಅಪ್ಪಣೆಯನ್ನು ಉಲ್ಲಂಘಿಸಬೇಡಿ! ಅರಸನ ಕೋಪದಲ್ಲಿ ಮರಣವುಂಟು" ಎಂದು ಮುಂತಾಗಿ ಒಮ್ಮೆ ಸವಿಸವಿ ನುಡಿಯುತ್ತಲೂ, ಮತ್ತೊಮ್ಮೆ ಇಲ್ಲದ ಬೆದರಿಕೆ ಹಾಕುತ್ತಲೂ ಸುಮತಿ ನಿರ್ಮಲರನ್ನು ಹುರುಪುಗೊಳಿಸಲೆತ್ನಿಸಿದರು. ಇಂತಹ ಮಾತುಗಳು ಶಿವಾಚಾರ ಪ್ರತಿಪನ್ನರಾದ ಆ ದಂಪತಿಗಳ ಮನಸ್ಸಿಗೆ ಬರುವವೇ? ಕ್ಷಣಿಕ ಸುಖಕ್ಕೆ ಮರುಳಾಗಿ ಅವರು ಮತಿಗೆಡಲಿಲ್ಲ. ರಾಜನಾದರೇನಾಯ್ತು? ಭವಿಯಾದ ಕೌಶಿಕನಿಗೆ ಶಿವಲಿಂಗ ಪ್ರೇಮಿಯಾದ ಮಹಾದೇವಿಯನ್ನು ಕೊಡಲಿಕ್ಕೆ ಅದೆಂದಿಗೆ ಒಪ್ಪಿಯಾರು! ಅವರು ಮೌನವಾಗಿ ಕುಳಿತು ಬಿಟ್ಟರು. ಅದೇ ಕಾಲಕ್ಕೆ ಮನೆಗೆಲಸದಲ್ಲಿ ತತ್ಪರಳಾಗಿದ್ದ ಮಹಾದೇವಿಯು ಅದನ್ನೆಲ್ಲ ಕೇಳಿ ಚಕಿತಳಾಗಿ, ಭಯಪಡದೆ, ಮೆಲ್ಲನೆ ತಂದೆ ತಾಯಿಗಳೆದುರಿಗೆ ಬಂದು ನಿಂತಳು, ತಾಯಿಗೆ ಮಗಳ ಮುದ್ದು ಮೊಗವನ್ನು ಕಂಡಾಕ್ಷಣವೇ ದುಃಖವು ಒಟ್ಟರಿಸಿ ಬಂದು, ದೊಡ್ಡ ದನಿಯಿಂದ ಅತ್ತು, ಆವಳನ್ನಾಲಿಂಗಿಸಿ, ಮುದ್ದಿಟ್ಟು ಅವಳ ಮೇಲೆ ಕಂಬನಿಗರೆದಳು. ಆವಾಗ ಮಹಾದೇವಿಯು, "ನನ್ನ ಪ್ರಿಯ ತಾಯ್ತಂದೆಗಳೇ! ತಾಳಿ! ಆಪತ್ತು ಬಂದಾಗ ಅಳುಕುವದು ಶಿವಭಕ್ತರ ಲಕ್ಷಣವಲ್ಲ. ನಿಮಗೆ ದೇವರಲ್ಲಿ ವಿಶ್ವಾಸವಿಲ್ಲವೇ? ನಿಮಗೆ ಕಷ್ಟಕೊಡಲು ನಾನು ಹುಟ್ಟಿಲ್ಲ. ನನ್ನಾಣೆಯಾಗಿ ಶಿವಭಕ್ತಿಯ ಬಲವಿರುವತನಕ ಯಮನ ಅಂಜಿಕೆಯೂ ಸಹ ಇಲ್ಲ. ಎಂದು ಅವರನ್ನು ಸಮಾಧಾನ ಪಡಿಸಿ, ಬಂದ ದಾಸಿಯರಕಡೆಗೆ ತನ್ನ ಮೋರೆ ತಿರುವಿ. "ನಿಮ್ಮ ರಾಜನು ನನ್ನ ಇಚ್ಛೆಯಂತೆ ನಡೆದರೆ ನಾನೇ ಅವನೊಡನೆ ದುದುವೆಯಾಗುವೆನು" ಎಂದು ಗಾಂಭೀರ್ಯದಿಂದ ಅಂದಳು. ತಮ್ಮ ಕಾರ್ಯವು ಕೈಗೂಡಿತೆಂದು ಹರ್ಷಬಟ್ಟು ಆ ದಾಸ ದಾಸಿಯರು ಲಗುಬಗೆಯಿಂದ ಅರಸನಬಳಿಗೆ ಹೋಗಿ, ನಡೆದ ಸಂಗತಿಯನ್ನು ಅರಿಕೆ ಮಾಡಿಕೊಂಡರು. ಅಂದು ವಿಷಯಲಂಪಟನಾದ ಕೌಶಿಕನ ಆನಂದ ಸಾಗರವು ಉಕ್ಕೇರಿ, ಹೊರಚೆಲ್ಲಿರಬಹುದಲ್ಲವೇ? ಅವನು ನೆಟ್ಟಗೆ ಮಹಾದೇವಿಯ ಮನೆಗೇಬಂದ, ಅವಳು ಹೇಳಿದಂತೆ ಪ್ರತಿಜ್ಞೆಮಾಡಿದ. ಅವಳನ್ನು ಅರಮನೆಗೆ ಕರಕೊಂಡು ಬರಲಿಕ್ಕೆ, ಮನೋಹರೆಯೆಂಬ ತನ್ನ ದಾಶಿಯೋರ್ವಳನ್ನು ಅಲ್ಲಿಯೇ ಬಿಟ್ಟು, ತಾನು ಹಿಂತಿರುಗಿದ, ಓದುಗರೇ! ಸ್ತ್ರೀಯರಿಗೆ ಸೌಂದರ್ಯವೂ ಒಂದು ಸಂಕಟವಲ್ಲವೆ?

ನಮ್ಮ ಮಹಾದೇವಿಯಕ್ಕನು ಸ್ನಾನ ಶಿವಪೂಜಾದಿಗಳನ್ನು ತೀರಿಸಿಕೊಂಡು, ಅರಸನು ತಂದು ಕೊಟ್ಟ ಕುಪ್ಪಸ, ಪೀತಾಂಬರಗಳನ್ನುಟ್ಟು, ರತ್ನಾಭರಣಗಳಿಂದ ಭೂಷಿತಳಾಗಿ, ಹಸ್ತದಲ್ಲಿ ಸ್ವಲ್ಪ ಭಸ್ಮವನ್ನು ತಕ್ಕೊಂಡು, ಶಿವಧ್ಯಾನಗೈಯುತ್ತಾ,

ಮನೋಹರೆಯು ಕೂಡ ಅರಮನೆಗೆ ಬಂದಳು. ದಾಸಿಯು ಅರಸನ ಏಕಾಂತ ಸ್ಥಾನವಾದ ಚಂದ್ರಭವನವೆಂಬ ಮಹಾಲಿಗೆ ಅವಳನ್ನು ಕಳಿಸಿಹೋದಳು. ಮೊದಲೇ ಮಾರ್ಗನಿರೀಕ್ಷಣೆಯಲ್ಲಿದ್ದ ಕೌಶಿಕನು ಅಲ್ಲಿಗೆ ಬಂದೇ ಬಿಟ್ಟ, ಹಂಸ ತೂಲಿಕಾತಲ್ಪದಮೇಲೆ ಮಹಾದೇವಿಗೆ ಕೂಡ್ರಲಿಕ್ಕೆ-ಹೇಳಿ, ತಾನೊಂದು ಬೇರೆ ಆಸನದಲ್ಲಿ ಕುಳಿತು, ಮುಗುಳ್ನಗೆ ನಕ್ಕು, ಅವಳನ್ನೊಮ್ಮೆ ದಿಟ್ಟಿಸಿ ನೋಡಿ, "ಮೋಹನಾಂಗಿ ! ನನ್ನ ಚಿಂತಾರತ್ನವೇ !! ಇಂದಿಗೆ ನನ್ನ ಜನ್ಮ ಸಾರ್ಥಕ ವಾಯ್ತು !!! "

"ಮಹಾರಾಜ ! ಹಾಗೆ ಒಮ್ಮೆಲೇ ದುಡುಕಬೇಡ ! ನಿನ್ನ ಪ್ರತಿಜ್ಞೆಯು ಸ್ಮರಣೆಯಲ್ಲಿದೆಯಷ್ಟೇ !! "

"ಇದೆ ನಿನ್ನ ಮನೋಗತವೇನು ? ಬೇಗಹೇಳು !"

"ನೀನು ನನ್ನಂತೆ ಇಷ್ಟಲಿಂಗವನ್ನು, ಭಸ್ಮರುದ್ರಾಕ್ಷಿಗಳನ್ನು ಧರಿಸಿ, ಶುದ್ಧ ವೀರಶೈವನಾಗದವಿನಾ ನನ್ನನ್ನು ಮುಟ್ಟಲಿಕ್ಕೆ ತಕ್ಕವನಾಗಲಾರಿ !"

"ಏನು ! ಕಾಮಭಕ್ತನಾದ ನಾನು ಶಿವಭಕ್ತನಾಗಬೇಕೆ? ಥೀ ! ಎಂದಿಗೂ ಶಕ್ಯವಿಲ್ಲ. ಏನಂದೆ? ನಾನು ನಿನ್ನನ್ನು ಮುಟ್ಟಲಿಕ್ಕೆ ತಕ್ಕವನಾಗಲಾರೆನೆ? ಇಕೋ ನೋಡು! ಮುಟ್ಟುತ್ತೇನೆ " ಎಂದು ಮೇಲಕ್ಕೇಳಲು, ಮಹಾದೇವಿಯು, "ಅರಸಾ! ಪರಸ್ತ್ರೀಯರ ಮೇಲೆ ಕಣ್ಣಿಟ್ಟು ಕೇಡಿಗೇಡಾಗಬೇಡ. ರಾವಣ, ಕೀಚಕ, ದುಶ್ಯಾಸನ, ವಾಲಿ ಮೊದಲಾದ ಕಾಮಾಂಧರ ಗತಿಯು ಏನಾಯಿತು, ಗೊತ್ತಿಲ್ಲವೇ?" ಎಂದು ಎಷ್ಟು ತಿಳಿಹೇಳಿದರೂ ಕೌಶಿಕನಿಗೆ ಬುದ್ಧಿ ಬರಲಿಲ್ಲ. ಅವನು ಕಾಮಾತುರನು ಬಲತ್ಕಾರದಿಂದ ಅವಳನ್ನು ಮುಟ್ಟಿದನು. ಕ್ಷಣಮಾತ್ರದಲ್ಲಿಯೇ ಬಗ್ ! ಭಗಲ್ !! ಬುಗ್ ! ಭುಗಿಲ್ !! ಎಂದು ಉರಿಯು ಕೌಶಿಕನನ್ನು ಮುತ್ತಿ ಸುಡತೊಡಗಿತು. ಕೂಡಲೇ ಅವನು "ಶಿವಶಿವಾ ! ತಾಳಲಾರೆ ! ಸರ್ವಥಾ ತಪ್ಪಾಯ್ತು ! ಜನನೀ ! ಅಕ್ಕಮಹಾದೇವಿ !! ಕ್ಷಮಿಸು ಕ್ಷಮಿಸು !!! ತಾಯೀ ರಕ್ಷಿಸು ! ರಕ್ಷಿಸು !! ಎಂದು ಗೋಳಿಟ್ಟು ಅಕ್ಕನಿಗೆ ಸಾಷ್ಟಾಂಗವೆರಗಲು, ಶಿವಧ್ಯಾನದಲ್ಲಿದ್ದ ಮಹಾದೇವಿಯು ತನ್ನ ಕೈಯೊಳಗಿನ ವಿಭೂತಿಯನ್ನು ಪುಡಿ ಮಾಡಿ ಅವನಿಗೆಉಗ್ಗಿದಳು; ಆಗಲೇಉರಿಯೆಲ್ಲ ಮಾಯವಾಗಿಕೌಶಿಕನು ಆ ಘೋರ ಸಂಕಟದಿಂದ ಬಿಡುಗಡೆಯಾದನು. ಅಂತಃಶಕ್ತಿಯಿಂದ ಸ್ಫೂರ್ತಿಗೊಂಡ ನಮ್ಮ ಮಹಾದೇವಿಯಕ್ಕನು ತಾನುಟ್ಟ ಸೀರೆಯನ್ನು ಕಿತ್ತೊಗೆದು ತನ್ನಲ್ಲಿ ಗುಪ್ತವಾಗಿದ್ದ ನಿರ್ಮೋಹ ಸ್ಥಿತಿಯನ್ನು ದಿಗಂಬರೆಯಾಗಿ ವ್ಯಕ್ತಪಡಿಸಿದಳು. ಬಳಿಕ ಅವಳು ತಲೆಯನ್ನು ನಡುಗಿಸಿ ಕೂದಲುಗಳನ್ನೆಲ್ಲ ಮೈಮೇಲೆ ಹರಡಿಕೊಂಡು ಪ್ರಳಯ ಕಾಲದ ದೇವಿಯಂತೆ ನಿಂತುಕೊಂಡು, "ಛೀ ಮೂರ್ಖಾ ! ಇದೆಯೋ ನಿನ್ನ ಪ್ರತಿಜ್ಞಾಪಾಲನವು ! " ಎಂದು ನುಡಿದು ಹಾಗೆ ಹೊರ ಹೊರಟಳು.

ಆತ್ಮಶಕ್ತಿಯ ತೇಜಸ್ಸಿನಿಂದ ಪ್ರದೀಪ್ತಳಾದ ಮಹಾದೇವಿಯ ಸೀರೆಯನ್ನು ಮುಟ್ಟಿದ ರಾಜನ ಕಾಮವಾಸನೆಯು ಭಸ್ಮವಾಗದಿರುವದೇ ? ಅವನಲ್ಲಿ ಆ ಕ್ಷಣವೇ ಮಹಾದೇವಿಯ ವಿಷಯಕ್ಕೆ ಪೂಜ್ಯಭಾವನೆಯು ಉದಯವಾಯ್ತು. ತಾನು ಪೂರ್ವದಲ್ಲಿ ಮಾಡಿದ ಅತ್ಯಾಚಾರಗಳನ್ನು ನೆನೆದು ದಿಙ್ಮೂಢನಾದನು. ತಾನಿದ್ದ ತಾಣದಿಂದ ಮುಂದೆ ಒಂದು ಹೆಜ್ಜೆಯಿಡಲು ಸಹ ಶಕ್ತಿಯಿಲ್ಲದಾಯ್ತು, ಹೊರಬದಿಗೆ ನಿಂತುಕೊಂಡಿದ್ದ ಪರಿವಾರವೆಲ್ಲ ಮಹಾದೇವಿಯನ್ನು ಕಂಡು ಏನೂ ತಿಳಿಯದೆ ಚಿತ್ರದಲ್ಲಿ ಬರೆದ ಗೊಂಬೆಯಂತೆ ಎವೆಯಿಕ್ಕದೆ ಕಣ್ದೆರೆದು ನೋಡಲಾರಂಭಿಸಿತು. ವಾತಾವರಣವೇ ಬದಲಾಯ್ತು. ಮಹಾದೇವಿಯ ತಂದೆ-ತಾಯಿಗಳು ಮಗಳಿಗೊದಗಿದ ಪರಿಸ್ಥಿತಿಯನ್ನು ಕೇಳಿ ಸಖೇದಾಶ್ಚರ್ಯಯುತರಾಗಿ ಓಡುತ್ತ ಅವಳ ಕಡೆಗೆ ಬಂದರು; ಮಗಳನ್ನು ನೋಡಿ ಹಿಂದಿನದೆಲ್ಲವನ್ನೂ ಸ್ಮರಿಸಿ ಬಿಕ್ಕಿ ಬಿಕ್ಕಿ ಅಳಹತ್ತಿದರು ಅಷ್ಟರೊಳಗೆ ಅವಳ ಸಖಿಯರೂ ಬಂದು ಬಹಳವಾಗಿ ವಿಷಾದಗೊಂಡರು.

ಆಗ ವೈರಾಗ್ಯಶಾಲಿನಿಯಾದ ಮಹಾದೇವಿಯಕ್ಕನು ಅವರೆಲ್ಲರಿಗೆ, “ ತಾಯಿ ತಂದೆಗಳಿರಾ ! ಸೋದರ-ಸೋದರಿಯರೆ ! ಪ್ರಿಯ ಗೆಳತಿಯರೆ ! ನಾನು ನನ್ನ ಪ್ರಾಣನಾಥನಾದ ಮಲ್ಲಿಕಾರ್ಜುನನಲ್ಲಿಗೆ ಹೋಗಬೇಕೆಂದಿರುವೆ. ನೀವೆಲ್ಲರೂ ಸಂತೋಷದಿಂದ ಬೀಳ್ಕೊಡಬೇಕು. ಶರೀರದ ಮೇಲಿನ ಮೋಹವು ಅಳಿಯದೆ ವಿಶ್ವನಾಥನು ಕಾಣಲಾರನು. ನಾನೀಗ ಮೊದಲು ಕಲ್ಯಾಣನಗರದಲ್ಲಿ ಜಗತ್ತಿನ ಕಲ್ಯಾಣಕ್ಕಾಗಿ ಬಸವಾದಿ ಪ್ರಮಥರು ಸ್ಥಾಪಿಸಿದ ಶಿವಾನುಭವ ಮಂಟಪವೆಂಬ ಸಂಸ್ಥೆಯನ್ನು ಸೇರಿ, ಸ್ತ್ರೀಯರ ದೇವದತ್ತವಾದ ಧಾರ್ಮಿಕ ಸ್ವಾತಂತ್ರ್ಯವನ್ನು ಗಂಡಸರು ಅಪಹರಿಸಿದುದು, ಅತಿ ಅನ್ಯಾಯವೆಂಬ ವಿಚಾರವನ್ನು ಅವರಲ್ಲಿ ತಂದುಕೊಡಲು ಸಾಧ್ಯವಾದಮಟ್ಟಿಗೆ ಯತ್ನಿಸುವೆನು. ” ಎಂದು ಎಲ್ಲರ ಹೃದಯವೂ ಕರಗಿ ನೀರಾಗುವಂತೆ ನುಡಿದು ಸರ್ವರಿಗೂ ಶರಣುಮಾಡಿದಳು. ತರುವಾಯ ಅವಳು ತಂದೆ-ತಾಯಿಗಳ ಚರಣಕ್ಕೆರಗಿ. “ ನೀವು ನನ್ನ ಸತ್ಯಸುಖಾನುಭವಕ್ಕೆ ಕಲ್ಲುಹಾಕಲು ಇಚ್ಛಿಸದಿದ್ದರೆ ಶೋಕಬಿಟ್ಟು, ನನ್ನ ಪ್ರಿಯ ಪತಿಯ ಕಡೆಗೆ ಪ್ರೇಮದಿಂದ ಕಳಿಸಿಕೊಡಿರಿ ” ಎಂದು ಹೇಳಲು ತಾಯಿಯು ದುಃಖಾತಿರೇಕದಿಂದ, ‘ ನಿನಗೆಲ್ಲಿಯ ಪತಿಯಿರುವನವ್ವ ? ನಾವು ನಿನಗೆ ಯೋಗ್ಯ ಗಂಡನನ್ನು ಹುಡುಕಿ ತರುವೆವು ! ಬಾರಮ್ಮಾ ! ’ ಎಂದೆನ್ನುವಷ್ಟರೊಳಗೆ ಮಹಾದೇವಿಯು, “ ಸಾವಿಲ್ಲದ, ಕೇಡಿಲ್ಲದ ರೂಹಿಲ್ಲದ ಚೆಲುವಂಗಾನೊಲಿದೆನವ್ವ, ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಚೆಲುವಂಗಾನೊಲಿದೆ ತಾಯಿ ! ಕುಲಸೀಮೆ ಇಲ್ಲದ ನಿಸ್ಸೀಮ ಚೆಲುವಂಗೆ ನಾನೊಲಿದೆ; ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ, ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ” ಎಂದು ವೀರ ವೈರಾಗ್ಯಾವೇಶದಿಂದ ಮಾತಾಡಿ ಪುನಃ ವಂದಿಸಿ ಹಾಗೆಯೇ ಮುಂದಕ್ಕೆ ಸರಸರನೇ ಸಾಗಿ ಹೋದಳು. ಸೌಭಾಗ್ಯ ದೇವ

ತೆಯೇ ತಮ್ಮ ದುರ್ದೈವದಿಂದ ಊರುಬಿಟ್ಟು ಹೋಯಿತೆಂದು ಅಲ್ಲಿದ್ದವರೆಲ್ಲರೂ ಮರ್ರನೆ ಮರುಗಿದರು. ಮೇಲಿಂದಮೇಲೆ ಆ ಮಹಾದೇವಿಯ ದಿವ್ಯಸಂದೇಶವನ್ನು ನೆನಪಿಗೆ ತಂದು ಶಾಂತರಾಗುತ್ತಿದ್ದರು.

ಶಿವಾನುಭವ ಮಂಟಪದ ವರ್ಣನೆಯನ್ನು ಎಷ್ಟೆಂದು ಮಾಡುವದು ! ಆಗಿನ ಕಾಲದಲ್ಲಿ ಎಲ್ಲಿಯಾದರೂ ಭೂಮಿಯಲ್ಲಿ 'ಕೈಲಾಸ' ವಿದ್ದಿದ್ದರೆ ಅದು ಕಲ್ಯಾಣ ದಲ್ಲಿ-ಮತ್ತದರಲ್ಲಿಯೂ, ಶಿವಾನುಭವ ಮಂಟಪದಲ್ಲಿ-ಅದೇಕೆ ? ಶೂನ್ಯಸಿಂಹಾಸನದಲ್ಲಿ ಇತ್ತೆಂದು ಹೇಳಬಹುದು. ಅದ್ವಿತೀಯ ವಿರಶೈವ ಸಿದ್ಧಾಂತಿಗಳಿಂದಲೂ, ಪ್ರತಿಭಾಸಂಪನ್ನ ಶಿವಕವೀಶ್ವರರಿಂದಲೂ, ಮಹಾ ಶಿವಶರಣ-ಶರಣಿಯರಿಂದಲೂ, ಅಲೌಕಿಕ ತರ್ಕಶಾಸ್ತ್ರಪಂಡಿತರಿಂದಲೂ, ಕನ್ನಡ ಉಪನಿಷತ್ತಾದ ವಚನ ವಾಙ್ಮಯವಿಶಾರದರಿಂದಲೂ ಮತ್ತು ಬಹುಜನ ಸಂಗೀತ ರತ್ನಾಕರರಿಂದಲೂ ಆ ಮಂಟಪವು ಕಂಗೊಳಿಸುತ್ತಿತ್ತು. ಒಂದೆಡೆಗೆ ಶ್ರೀ ಬಸವೇಶ್ವರ, ಮಡಿವಾಳ, ಮಾಚಯ್ಯ, ಕಿನ್ನೂರಿ ಬ್ರಹ್ಮಯ್ಯ, ಹಡಪದ ಅಪ್ಪಣ್ಣ, ಮಾದಾರ ಚನ್ನಯ್ಯ, ಬಿಬ್ಬೀ ಬಾಚಯ್ಯ, ಹರಳಯ್ಯ, ಮಧುವಯ್ಯ, ಸುಂಕದ ಬಂಕಣ್ಣ ಮೊದಲಾದ ಶರಣರು ಒಪ್ಪುತ್ತಿದ್ದರು; ಇನ್ನೊಂದೆಡೆಗೆ ನಿಂಬೆಕ್ಕ, ಬಿಜ್ಜಲದೇವಿ, ರೆಮ್ಮವ್ವೆ, ಕಾಳವ್ವೆ ನೀಲಾಂಬಿಕೆ, ಗಂಗಾಬಿಕೆ, ಅಕ್ಕನಾಗಮ್ಮ, ಸುಗ್ಗಲದೇವಿ, ಆದವ್ವೆ, ಗಿರಿಜವ್ವೆ ಸೋಮವ್ವೆ ಮುಂತಾದ ಶರಣೆಯರೂ ಶೋಭಿಸುತ್ತಿದ್ದರು. ಶ್ರೀ ಅಲ್ಲಮ ಪ್ರಭುದೇವರು ಅಧ್ಯಕ್ಷ ಪೀಠವನ್ನಲಂಕರಿಸಿದ್ದರು. ಶಿವಾನುಭವ ಗೋಷ್ಠಿಯು ಭರದಿಂದ ನಡೆದಿತ್ತು. ಅದೇ ವೇಳೆಗೆ ನಮ್ಮ ದಿಗಂಬರಿಯಾದ ಅಕ್ಕ ಮಹಾದೇವಿಯು ಮಂಟಪವನ್ನು ಪ್ರವೇಶಿಸಿ, ಪ್ರಭುವಿಗೂ, ಬಸವಾದಿ ಪ್ರಮಥರಿಗೂ ಪ್ರಣಾಮಗೈದು ಒತ್ತಟ್ಟಿಗೆ ನಿಂತುಕೊಂಡಳು. ಅವಳನ್ನು ಕಂಡು ಎಲ್ಲರೂ ಆಶ್ಚರ್ಯಭರಿತರಾದರು.

ಆನಂತರ ಪ್ರಭುದೇವರು ಅವಳಿಗೆ, "ಯೌವನವನೊಳಕೊಂಡ ಸತಿ ನೀನು ಇತ್ತಲೇತಕ್ಕೆ ಬಂದಿಯವ್ವ ? ಸತಿಯೆಂದರೆ ಮುನಿವರು ನಮ್ಮ ಶರಣರು. ನಿನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು, ಅಲ್ಲದಿರೆ ತೊಲಗು ತಾಯೆ ! ನಮ್ಮ ಗುಹೇಶ್ವರನ ಶರಣರಲ್ಲಿ ಸಂಗಸುಖ ಸನ್ನಿಹಿತವ ಬಯಸುವರೆ ! ನಿನ್ನ ಪತಿಯಾರೆಂಬುದು ಹೇಳಾ ಎಲೆ ಅವ್ವಾ !" ಎಂದು ನುಡಿದರು. ಆಗ ಅಕ್ಕನು, "ಶಿವನೇ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆನು. ತಾಯ್ತಂದೆಗಳು ಸಾದೃಶ್ಯವಪ್ಪ ವರನ ನೋಡಿ, ಅವನೊಡನೆ ಮದುವೆ ಮಾಡಲು ನಿಶ್ಚಯಿಸಿಕೊಟ್ಟರು; ಇದುಕಾರಣ ಚೆನ್ನಮಲ್ಲಿಕಾರ್ಜುನ ಗಂಡನೆನಗೆ ಮಿಕ್ಕಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ ! ಪ್ರಭುವೆ !" ಹೀಗೆ ತನ್ನ ಪತಿಯ ಕುರುಹನ್ನು ಹೇಳಿದಳು. ಅವಳ ಸತ್ವವನ್ನು ಮತ್ತಿಷ್ಟು ಬೈಲಿಗೆಳಿಯು

ಪದಕ್ಕಾಗಿ ಪ್ರಭುಗಳು ಪುನಃ ಅವಳನ್ನು ತಡವಿ "ಮಹದೇವಿ! ಕೌಶಿಕನೆಂಬ ಭವಿಯಮೇಲೆ ಲಿಂಗಧಾರಣವಾಗದ ತಪ್ಪು ಹೊರಿಸಿ, ಸಿಟ್ಟಾಗಿ ಬಂದಿರುವ ನಿನ್ನಲ್ಲಿ ನಿಜವಾದ ವೈರಾಗ್ಯವಿಲ್ಲ ಭಾವಶುದ್ಧವಃದಲ್ಲಿ ಸೀರೆಯನುಳಿದು, ಕೂದಲ ಮರೆ ಮಾಡಿರುವಿಯೇತಕ್ಕೆ? ಅದು ಅಂತರಂಗದ ನಾಚಿಕೆ ಬಾಹ್ಯದಲ್ಲಿ ತೋರುತ್ತಿದೆ." ಎಂದು ಆಡಲು, ಅವಳು, "ಕಾಯಕರ್ರನೆ ಕಂದಿದರೇನಯ್ಯ! ಮಿರ್ರನೆ ಮಿಂಚಿದರೇನಯ್ಯ! ಅಂತರಂಗ ಶುದ್ಧವಾದ ಬಳಿಕ ಚನ್ನಮಲ್ಲಿಕಾರ್ಜುನ ಲಿಂಗವು ಒಲಿದ ಕಾಯವು ಹೇಗಿದ್ದರೇನಯ್ಯ? ಫಲಪಕ್ವವಾಗದೆ ಹೊರಗಣ ಸಿಪ್ಪೆ ಒಪ್ಪಗೆಡದು; ಕಾಮನ ಮುದ್ರೆಯ ಕಂಡು ನಿಮಗೆ ನೋವಾದೀತೆಂಬ ಭಾವದಿಂದ ಮುಚ್ಚಿದೆ. ಇದಕ್ಕೆ ನೋವೇತಕೆ? ಕಾಡದಿರಣ್ಣಾ ಮಲ್ಲಿಕಾರ್ಜುನದೇವರ ಒಳಗಾದವಳಾ!" ಎಂದು ಮಾತಾಡಿದಳು. ಕೇಳಿದ ಬೇಕಾದ ಪ್ರಶ್ನೆಗೆ ಸರಿಯಾಗಿ ಉತ್ತರಕೊಡುವ ಮಹಾದೇವಿಯಕ್ಕನ ಅಗಾಧ ಜ್ಞಾನಕ್ಕೊಲಿದು, ಚನ್ನಬಸವ, ಸಿದ್ಧರಾಮದೇವ, ಬಸವಾದಿ ಶರಣರು ಚೆನ್ನಾಗಿ ತಲೆದೂಗಿದರು. ಮಹಾದೇವಿಯ ಜ್ಞಾನಪ್ರಕಾಶದಿಂದ ಮಂಟಪವು ತೊಳಗಿ ಬೆಳಗಿತು. ಬಳಿಕ ಅಧ್ಯಕ್ಷರು ಅವಳ ಯೋಗ್ಯತೆಯನ್ನು ಸಭಿಕರಿಗೆಲ್ಲ ತಿಳಿಸಿ, "ಮಹಾದೇವಿ! ಹೊರಗೆ ನೀ ಹೆಣ್ಣಾಗಿ ತೋರಿದರೆ ಏನಾಯ್ತು? ಪರಮನೊಳು ನಿನ್ನಮನ ಬೆರೆತಿರುವುದಲ್ತೆ? ಹೆಸರು-ರೂಹುಗಳಿರದ ಪರವಸ್ತು ನೀನಹುದು; ಅಕ್ಕ! ನೀನೆಂದಿಗೂ ವಂದ್ಯಳಹುದಮ್ಮ!" ಎಂದು ಅನೇಕ ವಿಧದಿಂದ ಸ್ತುತಿಸುವಷ್ಟರಲ್ಲಿಯೇ ಚನ್ನಬಸವಣ್ಣನು ಮುಂದೆ ಬಂದು, "ಆಜಕೋಟಿ ವರುಷದವರೆಲ್ಲರೂ ಹಿರಿಯರೆ? ಹುತ್ತೇರಿ ಬೆತ್ತಬೆಳೆದ ತಪಸ್ವಿಗಳೆಲ್ಲರು ಹಿರಿಯರೆ? ನಡುಮುರಿದು ಗುಡಗೂರಿ, ತಲೆನಡುಗಿ ನೆರೆತೆರೆಹೆಚ್ಚಿ ಮತಿಗೆಟ್ಟು, ಒಂದನಾಡಹೋಗಿ ಒಂಭತ್ತನಾಡುವ ಅಜ್ಞಾನಿಗಳೆಲ್ಲರು ಹಿರಿಯರೆ? ಅನುವರಿದು ಘನವ ಬೆರಿಸಿ, ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚೆನ್ನಸಂಗಯ್ಯನಲ್ಲಿ ಬೆರಿಸಿ, ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು" ಎಂಬುದಾಗಿ ಅನುಮೋದಿಸಿದರು.

ಪ್ರಿಯ ಓದುಗರೇ! ಅಲ್ಲಮಾದಿಗಳ ಹೊಗಳಿಕೆಯಿಂದ ನಮ್ಮ ಮಹಾದೇವಿಯು ಮೈಮರೆತು, ಹಿಗ್ಗಿಹಿಗ್ಗಿ ಕುಣಿದಾಡಿದಳೆಂದು ಭಾವಿಸುವದಿಲ್ಲವಷ್ಟೇ! ಸ್ತುತಿ-ನಿಂದೆಗಳನ್ನೂ, ಕನಕ-ಕಾಷ್ಠಗಳನ್ನೂ ಮಹಾತ್ಮರಾದವರು ಸಮನಾಗಿ ಕಾಣುವರೆಂಬ ಮಾತು ಅಕ್ಕನ ಉದಾಹರಣೆಯಿಂದಲೇ ಸಿದ್ಧವಾಗುವದು. ಇದೋ! ಅಕ್ಕನ ಎರಡು ಮುತ್ತಿನಂತಹ ವಚನಗಳನ್ನು ಅಕ್ಕರೆಯಿಂದ ಕೇಳಿ! ಅವಳ ವಿನಯ ಸಮತೆ-ಸೌಜನ್ಯಾದಿಗಳು ನಿಮಗೆ ತಾನೇ ಪ್ರಕಟವಾಗುವವು!!

"ಸಂಗದಿಂದಲ್ಲದೆ ಅಗ್ನಿ ಹುಟ್ಟದು; ಸಂಗದಿಂದಲ್ಲದೆ ಬೀಜ ಮೊಳೆದೋರದು; ಚನ್ನಮಲ್ಲಿಕಾರ್ಜುನ ದೇವಯ್ಯ! ನಿಮ್ಮ ಶರಣರ ಅನುಭಾವ ಸಂಗದಿಂದ ಆನು ಪರಮ ಸುಖಿಯಾಗಿ ಬದುಕಿದೆನಯ್ಯ ಪ್ರಭುವೆ."

"ಅಯ್ಯ ನಿಮ್ಮ ಅನುಭಾವಿಗಳ ಸಂಗದಿಂದ ಎನ್ನ ತನು ಶುದ್ಧವಾಯಿತು! ಅಯ್ಯ ನಿಮ್ಮ ಅನುಭಾವಿಗಳು ಎನ್ನ ಬರೆದೊರೆದು, ಕಡಿಕಡಿದು ಅರೆದರೆದು, ಅನು ಮಾಡಿದ ಕಾರಣ ಎನ್ನ ಮನ ಶುದ್ಧವಾಯಿತು. ಎನ್ನ ಸರ್ವಭೋಗಾದಿ ಭೋಗಂಗಳೆಲ್ಲ ನಿಮ್ಮ ಶರಣರಿಗರ್ಪಿತವಾಗಿ ಎನ್ನ ಪ್ರಾಣ ಶುದ್ಧವಾಯಿತು. ಎನ್ನ ಸರ್ವೇಂದ್ರಿಯಂಗಳೆಲ್ಲವು ನಿಮ್ಮ ಶರಣರ ಪ್ರಸಾದ ಕೊಂಡ ಕಾರಣ ಎನ್ನ ಸರ್ವಾಂಗ ಶುದ್ಧವಾಯಿತು. ಅಯ್ಯಾ ನಿಮ್ಮ ಶರಣರಿಂತು ಎನ್ನ ಸಾಗು ಮಾಡಿದ ಕಾರಣ ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರಿಗೆ ತೊಡಿಗೆಯಾದೆನಯ್ಯಾ ಪ್ರಭುವೆ!"

ಹೀಗೆ ಹಲಕೆಲವು ಪ್ರಶ್ನೋತ್ತರಗಳಾದಮೇಲೆ ಸ್ತ್ರೀಯರಿಗೂ ಅನುಭವಿಗಳೊಡನೆ ಚರ್ಚಿಸಲು ಹಕ್ಕು ಇರಲಿಕ್ಕೆಬೇಕು'' ಎಂಬ ಹೊಸದಾದ, ಮಹತ್ವದ ಗೊತ್ತುವಳಿಯು ಸರ್ವಾನುಮತದಿಂದ ಅಂಗೀಕರಿಸಲ್ಪಟ್ಟಿತು. ಸಾಕ್ಷಾತ್ ಪಾರ್ವತಿಯೇ ತಮಗೆ ದರ್ಶನವಿತ್ತಳೆಂದು ಕೂಡಿದವರೆಲ್ಲರು ಮನವಾರೆ ಕೊಂಡಾಡಿ, ಅಕ್ಕನ ಜಯ ಜಯಕಾರದೊಂದಿಗೆ ಅಂದಿನ ಸಭೆಯನ್ನು ವಿಸರ್ಜಿಸಿದರು.

ಭಕ್ತಿ, ಜ್ಞಾನ, ವೈರಾಗ್ಯಗಳ ತ್ರಿವೇಣೀ ಸಂಗಮದಂತಿದ್ದ ಅಕ್ಕಮಹಾದೇವಿಯು ಕಲ್ಯಾಣನಗರದ ಎಲ್ಲ ಸ್ತ್ರೀಯರೊಡನೆ ಬೆರೆತು, ಅವರಲ್ಲಿ ಅಡಗಿದ್ದ ಬಲವನ್ನು ತನ್ನ ಅದ್ಭುತ ಶಕ್ತಿ-ಸಂಚಾರದಿಂದ ವಿಕಾಸಗೊಳಿಸಿದಳು; ಅವರೆಲ್ಲರಿಗೂ ಸ್ವರೂಪ ಸುಖಾನುಭವದ ರಾಜಮಾರ್ಗದಂತಿದ್ದ ವೀರಶೈವ ಧರ್ಮ ಬೋಧೆಯನ್ನು ಮಾಡಿದಳು; ಸ್ತ್ರೀ ಸಮಾಜಕ್ಕೆ ಅಂಟಿಕೊಂಡ ಕಲಂಕವನ್ನು ದೂರ ಓಡಿಸಿದಳು; ಮಹಿಳೆಯರ ಉನ್ನತಿಯೇ ಜನಾಂಗದ ಜೀವಾಳವೆಂಬುದನ್ನು ವಿಶದಪಡಿಸಿದಳು. ಆ ತಾಯಿಯ ಧೈರ್ಯ, ಸಾಹಸ, ಪವಿತ್ರತೆ, ದುಃಖ-ಸಹಿಷ್ಣುತೆ, ಶಾಂತಿ, ಧ್ಯೇಯ-ತತ್ಪರತೆ ಮೊದಲಾದ ಸದ್ಗುಣಗಳನ್ನು ವರ್ಣಿಸಿ ಹೆಮ್ಮೆಪಡದ ಸ್ತ್ರೀಪುರುಷರಾರು? ನಮ್ಮ ಮಹಾದೇವಿ ತಾಯಿಯು ಸಮಾಜದಲ್ಲಿ ಮಾಡಬೇಕಾದ ತನ್ನ ಕರ್ತವ್ಯವನ್ನು ಪೂರ್ತಿಗೊಳಿಸಿ, ಪತಿಯಾದ ಮಲ್ಲಿಕಾರ್ಜುನನನ್ನು ಕಾಣುವದಕ್ಕಾಗಿ, ಶ್ರೀಶೈಲದ ಕಡೆಗೆ ನಡೆದು, ದಾರಿಯಲ್ಲಿ ಸೃಷ್ಟಿಸೌಂದರ್ಯವನ್ನು ಸವಿಯುತ್ತಾ, ಕಟ್ಟಕಡೆಗೆ ಆ ಬೆಟ್ಟವನ್ನು ಮುಟ್ಟಿದಳು. ಹಾಗೆಯೇ ಮುಂದುವರಿದು ಬಾಳೆಯ ತೋಟವೊಂದನ್ನು ಹೊಕ್ಕಳು. ಮುಂದೆ ಅವಳು ಅಲ್ಲಿ ಯೋಗ್ಯಸ್ಥಳದಲ್ಲಿ ಆಸನ ಬದ್ಧಳಾಗಿ ಕುಳಿತು, ಇಷ್ಟಲಿಂಗವನ್ನು ಎಡಗೈಯಲ್ಲಿಟ್ಟು ಅನನ್ಯಮನಸ್ಕಳಾಗಿ, "ಆಚಾರದ ಬೇರು ಹಿಡಿದು ಐಕ್ಯದ ತುದಿಯನ್ನೇರಿದೆ; ವೈರಾಗ್ಯದ ಸೋಪಾನದಿಂದೆ ಶ್ರೀಗಿರಿಯನೇರಿದೆ; ಕೈವಿಡಿದು ತೆಗೆದುಕೊಳ್ಳಾ ಚನ್ನಮಲ್ಲಿಕಾರ್ಜುನ!" ಎಂದು ಮೊದಲಾಗಿ ಸ್ತೋತ್ರಮಾಡಲಾರಂಭಿಸಿದಳು. ಆ ಸಮಯದಲ್ಲಿ ಒಂದು ದಿವ್ಯ ಜ್ಯೋತಿಯು ಪ್ರಜ್ವಲಿಸಿತು. ಮಹಾದೇವಿಯು ಕಣ್ದೆರೆದು ನೋಡಲು, ಕೆಂಜೆಡೆಗಳಿಂದೊಪ್ಪುವ ಸುಜ್ಞಾನಮೂರ್ತಿ ಜಂಗಮವೇ

ಆ ಬೆಳಕಾಗಿತ್ತು. ಹೆರುಷದಿಂದ ಆವಳ ಮೈಗೂದಲು ನೆಟ್ಟಗಾದವು. ಮತ್ತೆ ನುತಿಸತೊಡಗಿದಳು. ಆಗ ಜಂಗಮನು “ ಭವಗೆಟ್ಟು ಬಂದೆಯಾ ! ಬಾ ” ಎಂದು ಬಿಗಿದು ಅಪ್ಪಿಕೊಳ್ಳಲು, ಕಡಲನ್ನು ಅಪ್ಪಿಕೊಂಡ ಹೊಳೆಯಂತೆ ಜಂಗಮ ರೂಪಿಯಾದ ಮಲ್ಲಿಕಾರ್ಜುನನ ಬಗೆದಾವರೆಯಲ್ಲಿ ಅಕ್ಕ ಮಹಾದೇವಿಯು ಬೆರೆತು ಕೊಂಡಳು. ಇತ್ತ ಕಲ್ಯಾಣನಗರದಲ್ಲಿದ್ದ ಚನ್ನಬಸವಣ್ಣನವರು ತಮ್ಮ ಅರುವಿನ ನೋಟದಿಂದ ಅಕ್ಕನು ಲಿಂಗದಲ್ಲಿ ಅಡಗಿದ್ದನ್ನು ಅರಿದು, ಎಲ್ಲ ಪ್ರಮಥರ ಮುಂದೆ, “ ತನುವಿನೊಳಗಿದ್ದು ತನುವ ಗೆದ್ದಳು; ಮನದೊಳಗಿದ್ದು ಮನವ ಗೆದ್ದಳು; ವಿಷಯದೊಳಗಿದ್ದು ವಿಷಯವಗೆದ್ದಳು; ಅಂಗಸಂಗವತೊರೆದು ಭವವ ಗೆದ್ದಳು. ಕೂಡಲ ಚನ್ನಸಂಗಯ್ಯನ ಹೃದಯ ಕಮಲವ ಬಗೆದುಹೊಕ್ಕು ನಿಜ ಪದವನೈದಿದ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬೆನು, ” ಎಂಬುದಾಗಿ ಅಕ್ಕಮಹಾದೇವಿಯನ್ನು ಹೊಗಳಿ, ಅವಳ ಶ್ರೀಪಾದಕ್ಕೆ ನಮಸ್ಕರಿಸಿದರು.

ಧನ್ಯೆ ! ಧನ್ಯೆ ಮಹಾವಿರಾಗಿಣಿ ! ನಾರೀ ಶಿಖಾಮಣಿ !! ಪ್ರತಿದಾಕ್ಷಾಯಣಿ !!! ಶ್ರೀಷ್ಮಶಿವಶರಣೆ ! ಕರುಣಾಭರಣೆ !! ಪಾಪ ಪರಿಹಾರಿಣಿ ! ಬಾಲ ಬ್ರಹ್ಮಚಾರಿಣಿ !! ಶುಭಾವತಾರಿಣಿ !!! ಅಕ್ಕಮಹಾದೇವಿ ! ಅಣ್ಣ ಬಸವೇಶ ! ಕೃಪೆಮಾಡಿರಿ ! ಇನ್ನೊಮ್ಮೆ ಅವತರಿಸಿ ನಮ್ಮ ವೀರಶೈವ ಮತವನ್ನು ಪುನರುಜ್ಜೀವನಗೊಳಿಸಿರಿ !!

:: ೧೮ ನೆಯ ಅಧ್ಯಾಯ ಮುಗಿದುದು. ::

ಇಂತೆಂಬಲ್ಲಿಗೆ ಗದುಗಿನ ವೇ. ವೈದ್ಯಭೂಷಣ, ಜ್ಯೋತಿರ್ವಿದ್ವಾನ್,

ಪಂಡಿತ, ತೋಟಪ್ಪಯ್ಯ ಶಾಸ್ತ್ರಿಗಳವರಿಂದ

.... ಸಾದ್ಯಂತ ಪರಿಶೋಧಿಸಲ್ಪಟ್ಟ ....

ಶ್ರೀ ಶಿವಲೀಲಾಮೃತ ಗ್ರಂಥದ ದ್ವಿತೀಯ ಭಾಗ

.... ಸಮಾಪ್ತವು. ....

# ಸರ್ವ ಜ್ಯೋತಿಷ್ಯ ಪ್ರಭಾಕರ



ಇದರಲ್ಲಿ ೭೭೭ ಅಪೂರ್ವ ಜೋತಿಷ್ಯ ವಿಷಯಗಳು ಅಡಕವಾಗಿದ್ದು. ಎಂಥ ಅರಿಯದವರಿಗಾದರೂ ಜ್ಯೋತಿಷ್ಯದ ಮರ್ಮವನ್ನು ಸುಲಭರೀತಿ ತಿಳಿಸುವದು. ಅಲ್ಲಲ್ಲಿ ಉದಾಹರಣೆಗಳಿಂದ ಬರೆದಿರುವುದರಿಂದ ಎಲ್ಲರಿಗೂ ಪ್ರಿಯ ಗ್ರಂಥವಾಗಿದೆ. ಪ್ರತಿ ಮನೆಯಲ್ಲಿಯೂ ಇರಬೇಕಾದ್ದು ! ಈ ಪ್ರಭಾಕರನು ತನ್ನ ಪ್ರಭೆಯಿಂದ ಎಲ್ಲರ ಹೃದಯದಲ್ಲೂ ಬೆಳಕನ್ನುಂಟು ಮಾಡುವನು.

ಬೆಲೆ ೪—೮—೦ ಅಂಚೇ ವೆಚ್ಚ ೦—೮—೧

---

# ಸರ್ವ ವೈದ್ಯ ಪ್ರಭಾಕರ

ಇದೊಂದು ಗ್ರಂಥವನ್ನು ಆಯುರ್ವೇದ ವೈದ್ಯಾಭಿಮಾನಿಗಳು ಕಾದಿಡುವದು ಮೇಲು, ಈ ಪುಸ್ತಕದೊಳು ರೋಗಿಯ ಪರೀಕ್ಷೆ, ರೋಗನಿವಾರಣ ಕ್ರಮ, ತಕ್ಕ ಕಷಾಯ, ಚೂರ್ಣ, ಮಾತ್ರೆ, ಲೇಹ, ಆಸವ, ಭಸ್ಮಾದಿಗಳ ತಯಾರೀ ಕ್ರಮಗಳನ್ನು ಸ್ವಾರಸ್ಯವಾಗಿ ಬಿಡಿಸಿ ಬರೆದಿದೆ, ಪಾಂಡು-ಕ್ಷಯ-ಕುಷ್ಠಾದಿ ಅಸಾಧ್ಯ ವ್ಯಾಧಿಗಳಿಗೂ ಸುಸಾಧ್ಯ ಉಪಚಾರ ಬರೆದಿದೆ. ಬೆಲೆ ೪—೮—೦

---

ಮೆಚ್ಚುವ ಹೊಸ ಗ್ರಂಥ ! ಹುಚ್ಚು ಬಿಡುವ ಗೂಢ ವಿಚಾರವುಳ್ಳದ್ದು !!

# ಪ್ರತ್ಯಕ್ಷ ಪ್ರಶ್ನರಾಜ

ಇದು ೩ ಭಾಗಗಳಿಂದ ಕೂಡಿದೆ ೧ ನೇ ಭಾಗದ ಅನುಭವ ಪ್ರಶ್ನೆಗಳೆಲ್ಲ ಭೃಗುಋಷಿಗಳು ಬರೆದವು ಇರುತ್ತವೆ. ೨ ನೇ ಭಾಗದೊಳಿರುವ ಪ್ರಶ್ನೆಗಳ ೮ ವಿಭಾಗದಲ್ಲಿ ಪ್ರಶ್ನ ಕರ್ತನ ಮನೋಗತ ವಿಚಾರ, ಸದ್ಯಃ ಮನೆಯ ಪರಿಸ್ಥಿತಿ ಹೇಗಿದೆ? ಮುಂದೆ ಹೇಗೆ ? ಆತನಿರತಕ್ಕ ಮನೆಯ ವಿಸ್ತೀರ್ಣ, ಬಾಗಿಲ ದಿಕ್ಕು, ಮನೆಯೊಳಗಿನ ರೀತಿ, ಆತನ ಸುಖದುಃಖಾದಿಗಳು, ಮನೆಗೆ ಹಲವು ಜನರು ಕಾಲಿಟ್ಟ ವೇಳೆಯಿಂದ ಬಂದಂಥ ದೋಷ ಅರಿಷ್ಟವಿದೆಯೋ? ಇತ್ಯಾದ್ಯನೇಕ ಮರ್ಮವನ್ನೆಲ್ಲ ಸ್ವಚ್ಛರೀತಿಯಿಂದ ಹೇಳಲಿಕ್ಕೆ ಬರುವಂತಿದೆ. ಇದು ಗೂಢ ಕಣಿ ಪ್ರಶ್ನ ವಿವರವು! ೩ ನೇ ಭಾಗದಲ್ಲಿ ಮಾತ್ರ ರೋಗ ಘಟಿಸಿದಾಗ ತಕ್ಕ ಉಪಚಾರ ನೇಮಾದಿಗಳನ್ನು [ ವೈದ್ಯೋಪಚಾರಕ್ಕೆ ಮೀರಿದ ಘನವ್ಯಾಧಿಗಳಿಗೆ ] ವಿಸ್ತಾರವಾಗಿ ತಿಳಿಸಿರುತ್ತದೆ!! ತಿಳಿಗನ್ನಡದಲ್ಲಿ ಉದಾಹರಣೆಯೊಂದಿಗೆ ಬರೆದು ಪ್ರಸಿದ್ಧ ಮಾಡಿರುತ್ತೇವೆ.

ಬೆಲೆ ೨—೮—೦

# ಪ್ರಪಂಚದರ್ಪಣ

## (ವ್ಯಾಪಾರ ಸಂಜೀವಿನಿ ಸಹಿತ)

ಇದೊಂದು ಹೊಸದಾಗಿ ಪ್ರಾಪಂಚಿಕರಿಗೂ ವ್ಯಾಪಾರಸ್ಥರಿಗೂ ಅನುಕೂಲಿಸುವಂತೆ ಜ್ಯೋತಿಶ್ಯಾಸ್ತ್ರದ ಮುಖ್ಯಸಾರವನ್ನೇ ತೆಗೆದು ತಯಾರಿಸಿದ ಗ್ರಂಥವು. ಇದರಲ್ಲಿ ೭ ಭಾಗಗಳಿದ್ದು, ಅವುಗಳೊಳಗಿನ ವಿಷಯಗಳು ಕಾಲಕಾಲಕ್ಕೆ ಅವಶ್ಯ ಬೇಕಾಗತಕ್ಕವುಗಳೇ ಅವೆ. ಹತ್ತಿ, ಅರಳೆ, ನೂಲು, ರೇಶಿಮೆ, ಕಬ್ಬಿಣ, ಜವಳಿ, ಹತ್ತೀಕಾಳು, ಬೆಲ್ಲ, ಮೆಣಶಿನಕಾಯಿ, ಭಂಗಾರ, ಬೆಳ್ಳಿ, ಶೇಂಗಾ, ಎಳ್ಳು, ಕುಸಬಿ, ಜೋಳ, ಅಕ್ಕಿ, ಗೋಧಿ, ಕಡಲೆ ಮೊದಲಾದ ನೂರಾರು ವ್ಯಾಪಾರಗಳ ತೇಜಿ-ಮಂದಿಯನ್ನು ಸ್ವಂತ ತಿಳಿದುಕೊಳ್ಳುವ ಸುಲಭಗಣಿತಗಳೂ, ಸ್ತ್ರೀಯರು ಪ್ರಥಮ ಋತುವಾದ ವಿಸ್ತಾರ ಫಲಗಳೂ, ಮನೆಕಟ್ಟಿಸುವ ಆಯ ಮುಂತಾದವುಗಳೂ, ಪ್ರಯಾಣ ವಿಷಯವೂ, ಅನಂತ ಮುಹೂರ್ತ ವಿಷಯಗಳೂ, ಮುಟ್ಟಾದ ಸ್ತ್ರೀಯು ಳನ್ನು ಎಷ್ಟನೇ ದಿವಸ ಕೂಡುವದರಿಂದ ಎಂಥ ಮಕ್ಕಳು ಹುಟ್ಟುವರೆಂಬದೂ, ಸಮಸ್ತ ಶಕುನ ಶಾಸ್ತ್ರವಿಚಾರಗಳೂ, ಗಂಡು ಮಕ್ಕಳು ಹುಟ್ಟಿದ ಜಾತಕ ಫಲಗಳೂ, ಇದುವರೆಗೆ ಕನ್ನಡದಲ್ಲಿ ಯಾರೂ ಬರೆಯದಿದ್ದ ಹೆಣ್ಣುಮಕ್ಕಳ ಜಾತಕ ಫಲಗಳೂ ಇವೇ ಮೊದಲಾದ ಅನೇಕ ವಿಷಯಗಳನ್ನು ಸಣ್ಣವರಿಗೆ ಸಹ ತಿಳಿಯುವಂತೆ ಬರೆದಿದೆ. ಇದರೊಳಗಿನ ಎಲ್ಲವಿಷಯಗಳನ್ನು ಇಲ್ಲಿ ತಿಳಿಸಲಾಗುವದಿಲ್ಲ! ತರಿಸಿನೋಡಿದಲ್ಲಿ ಪುಸ್ತಕದ ಯೋಗ್ಯತೆ ತಿಳಿಯುವದು, ಮುಂಬೈ ಸಟ್ಟಾ ವ್ಯಾಪಾರದ ತೇಜಿ-ಮಂದಿ ಸಂಗತಿಯನ್ನೂ ಬರೆದಿರುತ್ತದೆ. ಬೆಲೆ ೨ರೂ. ೧೨ಆಣೆ

---

### ವೈದ್ಯ ತಂತ್ರಯಂತ್ರ ಮಂತ್ರಾದಿ

# ಪಂಚಸಿದ್ಧಿ

ಇದು ರಾಯಚೂರ ಪಟ್ಟಣ ನಿವಾಸಿ ಸಾಧುವರ್ಯ ಭೀಮಾವಧೂತರಿಂದಕಾಶಿ, ಗಯಾ, ಪ್ರಯಾಗ, ಬದರೀ, ಕೇದಾರ (ಹಿಮಾಲಯ) ಮುಂತಾದ ಪುಣ್ಯಸ್ಥಳಗಳಲ್ಲಿಯ ಅನುಭವಿಕ ಸಿದ್ಧಯೋಗಿಗಳ ಸಹಾಯ ಪಡೆದುಕೊಂಡು ಬರೆದ ಪುಸ್ತಕ. ಖಾತ್ರಿ ಮತ್ತು ಸಿದ್ಧಿಪ್ರದವಾದ ಎಷ್ಟೋ ಔಷಧಗಳ ತಯಾರಿ ವಿಷಯ, ಬಾವಾಜಿಗಳ ಚುಟ್ಕಾ ಸಂಗತಿಗಳು, ನಾನಾತರದ ಜ್ಯೋತಿಷ್ಯವಿಚಾರ, ಮಂತ್ರ-ತಂತ್ರ-ಯಂತ್ರ ಇವೇ ಮೊದಲಾದ ಸಂಗತಿಗಳನ್ನು ಸುಗಮವಾಗಿ ಬರೆಯಲ್ಪಟ್ಟಿವೆ ಈ ಗ್ರಂಥದ ವರ್ಣನೆಯನ್ನು ಎಷ್ಟು ಮಾಡಿದರೂ ತೀರದು !

ಬೆಲೆ ೩ರೂ. ೮ಆಣೆ — ಪೋಸ್ಟೇಜ ೭ಆಣೆ

ಪಂಡಿತ, ವೇ. ತೋಟಪ್ಪಯ್ಯ ಶಾಸ್ತ್ರಿಗಳವರು ಹಿರೇಮಠ,
ಶ್ರೀ ಜಗದ್ಗುರು ರೇಣುಕ ಶಿವಾನಂದ ರಾಜೇಂದ್ರ-ಧರ್ಮಗ್ರಂಥ
ಪ್ರಕಾಶನ ಕಚೇರಿ, ಗದಗ

ಒಂದನೆಯ ಕರಂಡ

# ಶಿವಾಚಾರ ನವರತ್ನ

## ( ಭಕ್ತ-ಮಾಹೇಶ್ವರರ ಕೈಪಿಡಿ )

ಸುಲಭ ರೀತಿಯ ಲಿಂಗಪೂಜಾ ಪದ್ಧತಿ-ಮಂತ್ರಗಳು, ರುದ್ರಾಕ್ಷಿಯನ್ನು ಹೇಗೆ ಪೋಣಿಸುವದು, ಜಪವಂ ಹೇಗೆ ಮಾಡಬೇಕು ಇತ್ಯಾದಿ ರಹಸ್ಯ ಸಂಗತಿಗಳು, ಪ್ರಾಣಾಯಾಮ ಕ್ರಮಗಳು-ಪಂಚಬ್ರಹ್ಮ ನ್ಯಾಸಾದಿಗಳು-ಗುರುಪಾದ ಪೂಜಾ ವಿಧಾನ, ತೀರ್ಥ ಸೇವಿಸುವ ಕ್ರಮ, ಲಿಂಗಧಾರಣ ಕಾಲಕ್ಕೆ ಉಪಯುಕ್ತ ಜಲಾಧಿವಾಸ, ಧಾನ್ಯಾಧಿವಾಸ, ಪ್ರಾಣಪ್ರತಿಷ್ಠಾದಿ ವಿಷಯಗಳನ್ನೂ, ಸುಧಾರಿಸಿ ಮಾಡಿಸತಕ್ಕ ವೀರಶೈವ ಲಗ್ನವಿಧಾನ, ದೀಕ್ಷಾ ಆವಶ್ಯಕತೆ, ಯಾವ ಪ್ರಣವಾಕ್ಷರಗಳನ್ನು ಯಾವದಿಕ್ಕಿನಲ್ಲಿ ಬರೆದು ಕಲಶ ಸ್ಥಾಪಿಸಬೇಕೆಂಬುದನ್ನೂ ಯಾವ ಯಾವ ಸಿಂಹಾಸನ (ಮಠ) ದವರು ಪರಡಿಯನ್ನು ಯಾವ ಪ್ರಕಾರ ಹಂಚಿಕೊಳ್ಳಬೇಕೆಂಬುವದನ್ನೂ, ಮಠಸ್ಥ-ಸ್ಥಾವರ-ಗಣಾಚಾರ್ಯ-ಮಠಪತಿ ಮೊದಲಾದವರಿಗಿರುವ ಹಕ್ಕು-ಬಾಧ್ಯತೆಯ ವಿವರವನ್ನೂ, ಅಷ್ಟಾವರಣ ವಿಚಾರ ಅವುಗಳ ಅವಶ್ಯಕತೆ, ಸ್ಥಲ-ಶೀಲಾದಿ ಮಹತ್ವ ಆಚಾರತತ್ವ, ವಿಷಯಗಳನ್ನೂ, ಲಕ್ಷ್ಮೀ ಸರಸ್ವತೀ ಪೂಜಾಕ್ರಮ, ಪ್ರಸಾದ ಪಂಚಾಕ್ಷರೀ ಆದ ಐದು ಮಂತ್ರಗಳ ಲಕ್ಷಣ (ಗೌಪ್ಯ), ದತ್ತಪುತ್ರ ಸ್ವೀಕಾರ ನಿಯಮ, ಶ್ರೀರುದ್ರ, ಅಂತ್ಯವಿಧಿ ಅಂದರೆ— ವಿಭೂತಿ ವೀಳ್ಯದ ಕ್ರಮ, ಸಮಾಧಿ ನಿಯಮ, ತಗಡು ಸಂಬಂಧ, ಪುಷ್ಪಾಂಜಲೀ ಇವೇ ಮೊದಲಾದ ಅನೇಕ ಅಗತ್ಯ ವಿಷಯಗಳನ್ನೂ ಒಳಗೊಂಡಿರುವ ಈ ನವೀನ ಗ್ರಂಥವನ್ನು ಪ್ರತಿಯೊಬ್ಬರೂ ತರಿಸತಕ್ಕದ್ದು. ಬೆಲೆ ೩-೪-೦

---

ಎರಡನೆಯ ಕರಂಡ

# ಶಿವಾಚಾರ ನವರತ್ನ

ಈ ಗ್ರಂಥದಲ್ಲಿ ಅನುಷ್ಠಾನ ಪದ್ಧತಿ, ನವಗ್ರಹ ಪೂಜಾಕ್ರಮ, ಹೊಸ ಮನೆ ಪ್ರವೇಶ ನೇಮ, ಗಣಸಹಸ್ರ ಶಿವಸಹಸ್ರ, ದೇವೀಸಹಸ್ರ, ಬಸವ ಸಹಸ್ರ, ಗಣೇಶಸಹಸ್ರ, ವೀರಭದ್ರನಾಮಾವಳಿ ಮುಂತಾದ ಅಗತ್ಯ ಸಂಗತಿಗಳನ್ನು ಬರೆದಿದ್ದೇವೆ. ಮಾಹೇಶ್ವರರ-ಭಕ್ತರುಗಳ ಪ್ರತಿ ಮನೆಯಲ್ಲಿಯೂ ಒಂದೊಂದು ಪುಸ್ತಕ ಇರುವುದೊಳ್ಳೇದು. ಪುಸ್ತಕದೊಳಗಿನ ಎಲ್ಲ ವಿಷಯಗಳನ್ನು ಬರೆಯುತ್ತ ಕೂಡ್ರುವದೇಕೆ? ದೀಕ್ಷಾವಿಧಾನ-ದೇವತಾ ಪ್ರತಿಷ್ಠಾ ವಿಧಾನ-ಮೃತ್ಯುಂಜಯ ಜಪವಿಧಾನ ಮುಂತಾದವುಗಳೂ ಅವೆ. ಬೆಲೆ ೩-೮-೦

ಭೂಲೋಕದ ಕಾಮಧೇನು ಎಂಬ ಸಚಿತ್ರ

# ∴ ವಿದ್ಯಾಭಾಂಡಾರ ∴

ಜ್ಯೋತಿಸ್ಯ, ವೈದ್ಯ, ರಮಲ, ಪಂಚಪಕ್ಷಿ, ಮೆಸ್ಮೆರಿಜಂ, ಕೈಗಾರಿಕೆ, ಯಂತ್ರ-ಮಂತ್ರ, ಹಸ್ತ ಮತ್ತು ಅಂಗಸಾಮುದ್ರಿಕ, ಸಂಸಾರ ಸುಖವಿಲಾಸ ರಹಸ್ಯ ಇತ್ಯಾದಿ ೧೦ ಶಾಸ್ತ್ರಗಳ ಗೌಪ್ಯವಿಚಾರಗಳನ್ನೆಲ್ಲ ಸಾಧಾರಣ ಕನ್ನಡಕಲಿತ ವರಿಗೆ ಸಹಿತ ಸ್ಪಷ್ಟ ತಿಳಿಯುವಂತೆ ವಿಸ್ತಾರವಾಗಿ ಬರೆದಿದೆ. [ ಮರ್ಮಉಳಿಸಿಲ್ಲ] ಶಾಳಾಮಾಸ್ತರರಂತೂ ತಪ್ಪದೇ ಓದಿ ಗುರುತ್ವದ ಯೋಗ್ಯತೆ ಕಾಯ್ದುಕೊಳ್ಳಿರಿ. ಪ್ರತಿಯೊಂದು ಮನೆಯಲ್ಲಿಯೂ ಇರಬೇಕಾದ ಮಾನ್ಯಗ್ರಂಥವು. ಇಂದಿಗೆ ೯ ಸಾವಿರ ಗ್ರಂಥಗಳು ಮಾರಿವೆ! ೪೫೦ ಪುಟದ ದೊಡ್ಡ ಪುಸ್ತಕ !!

ನಾಲ್ಕನೆಯಆವೃತ್ತಿ ಬೆಲೆ ೪ ರೂ. ೪ ಆಣೆ. ಪೋ ೮ ಆಣೆ

---

# ಸ್ತ್ರೀ-ಪುರುಷರ ಮುಖಕಲೆಯ ಫಲಶಾಸ್ತ್ರ

ಪ್ರತಿಯೊಬ್ಬ ಸ್ತ್ರೀ-ಪುರುಷರಿಗೆ ಮುಖದ ಮೇಲೆ ಯಾವಭಾಗದಲ್ಲಿಯಾದರೂ ಕಪ್ಪು, ಸಾದಾ ಕೆಂಪು, ಕಲೆ (ಗುರ್ತು ಮಚ್ಚೆ)ಗಳು ಇರುತ್ತವೆಯೋ ಅವನ್ನು ಆ [ಚಿನ್ಹದ] ಕಲೆಯ ಸ್ಥಾನದಲ್ಲಿರುವ ಸಂಖ್ಯೆ [ನಂಬರ] ತಿಳಿದು ಪುಸ್ತಕದೊಳಗೆ ಆ ನಂಬರಿನ ಫಲವನ್ನು ಓದಿದರೆ ಅವರ ಪ್ರಕೃತಿ ಸ್ವಭಾವ ಗುಣಗಳು ಯಾವ ರೀತಿ ಅವೆ, ಅವರ ಜೀವನದ ಯಾವ ಕಾಲದಲ್ಲಿ ಏನೇನು ಫಲಗಳು ಘಟಿಸುತ್ತವೆ ಇತ್ಯಾದಿ ಅವರ ಒಟ್ಟು ಜೀವನದ ಗುಟ್ಟೆಲ್ಲ ಸ್ಪಷ್ಟವಾಗಿ ತಿಳಿಯುತ್ತದೆ. ಇದೊಂದು ಕನ್ನಡದಲ್ಲಿ ಹೊಸ ಉಪಕಾರೀ ಪುಸ್ತಕವಿರುತ್ತದೆ ಮೊದಲು ಇಂಗ್ಲಿಷಿನಲ್ಲಿ 'ಮೋಲ್ಸ ಆ್ಯಂಡ ದೇರ್ ಮೀನಿಂಗ್' ಎಂಬ ಹೆಸರಿನಿಂದ ಪ್ರಸಿದ್ಧ ಆದದ್ದು ನಮ್ಮ ಅನುಭವಕ್ಕೆ ಬಂದ ಕಾರಣ ಎಲ್ಲರಿಗೂ ಇದರ ಲಾಭವಾಗಲೆಂದು ಕನ್ನಡದಲ್ಲಿ ಬರೆದು ಹೊರಡಿಸಿದ್ದೇವೆ.

ಬೆಲೆ ೧ರೂ. ೮ಆಣೆ



ಅಂಚೆವೆಚ್ಚ ೩ಆಣೆ

---

# ಮುಹೂರ್ತ ಚಿಂತಾಮಣಿ!

ಇದಾದರೂ ಬಾಲ್ಯ ಜ್ಯೋತಿಷ್ಯರಿಗೂ-ಪ್ರೌಢಜ್ಯೋತಿಷ್ಯರಿಗೂ ಪ್ರತಿವೇಳೆಗೆ ಅತ್ಯಾವಶ್ಯ ಬೇಕಾದುದೇ ಆಗಿದೆ.

ದೊಡ್ಡಗ್ರಂಥ ಬೆಲೆ ೩-೦-೦

# ವೀರಶೈವ ವಿಜಯ!

ಇದರಲ್ಲಿ ಶಿವಮತ ಶ್ರೇಷ್ಠತೆಯನ್ನೂ, ಶಿವಸರ್ವೋತ್ತಮತೆಯ ವಿವರವನ್ನೂ, ಎಲ್ಲ ಮತಗಳಲ್ಲಿಯೂ ವೀರಶೈವ ಮತಕ್ಕಿರುವ ಪವಿತ್ರತೆ-ಪೂಜ್ಯತೆಯನ್ನೂ ಅನೇಕ ಶ್ಲೋಕಾರ್ಥ-ಶಾಸ್ತ್ರದುಕ್ತಿಗಳಿಂದ ಬಿಡಿಸಿದೆ. ಬೆಲೆ ೨-೪-೦

---

# ವೀರಶೈವ ಷಟ್‌ಸ್ಥಲ ಚಿಂತಾರತ್ನ!

ವೀರಶೈವರ ಧರ್ಮಮಾರ್ಗ ತಳಹದಿಯಾಗಿರುವ ಷಟ್‌ಸ್ಥಲ-ಪಂಚಾಚಾರ-ಅಷ್ಟಾವರಣಗಳ ವಿವೇಕವನ್ನು ಸುಗಮವಾಗಿ ವಿವೇಚಿಸಿದೆ. ಬೆಲೆ ೧-೮-೦

---

# ಎಂಟು ವರ್ಷಗಳ ಭವಿಷ್ಯಫಲರತ್ನ!

( ಶಕ ೧೮೬೮ ವ್ಯಯ ಸಂ|| ದಿಂದ ೧೮೭೫ ವಿಜಯ ಸಂ|| ದ ವರೆಗೆ ).

ಈ ಪುಸ್ತಕದ ವರ್ಣನೆಯನ್ನು ಹೊಸದಾಗಿ ನಾವು ಮಾಡಬೇಕಾಗಿಲ್ಲ, ಈ ಮೊದಲೇ ನಮ್ಮ ಹಿಂದಿನ "ಎಂಟು ವರ್ಷಗಳ ಭವಿಷ್ಯ" ಪುಸ್ತಕವನ್ನೋದಿ ಆದರಂತೆ ವ್ಯಾಪಾರ ಮಾಡಿ, ಸಾವಿರಾರು ವರ್ತಕರು ಲಕ್ಷಾಧೀಶರಾಗಿ ನಮ್ಮನ್ನು ಮನಃಪೂರ್ವಕ ಕೊಂಡಾಡುತ್ತ, ಮೊದಲಿನ ನಿಮ್ಮ ಎಂಟುವರ್ಷಗಳ ಭವಿಷ್ಯ ಪುಸ್ತಕವನ್ನು ತ್ರಿಜೋರಿಯಲ್ಲಿಟ್ಟು ಪೂಜಿಸುತ್ತಿದ್ದೇವೆ. ಸ್ವಾಮಿ, ಹೊಸದಾಗಿ ತಯಾರಿಸಿದ ಭವಿಷ್ಯ ಪುಸ್ತಕವಿದ್ದರೆ—ಬೇಗನೇ—ಬಹು ಬೇಗನೆ ಕಳಿಸಿರಿ—ಕಳಿಸಿರಿ ಎಂದು ದಿನೇ ದಿನೇ ಪತ್ರಬರೆಯುತ್ತ ಅಪೇಕ್ಷಿಸುವ ಕಾಟಕ್ಕೆ ಈ ಪುಸ್ತಕ ಹೊರಡಿಸಿರುವೆವು. ಸ್ವಲ್ಪೆ ಪ್ರತಿಗಳಿವೆ ತರಿಸಿರಿ. ಬೆಲೆ. ೪-೦-೦

---

# ತಿಥ್ಯಾದಿ ಚೂಡಾಮಣಿ

ಬೇಕಾದ ವರ್ಷದೊಳು ಹೊಸದಾಗಿ ಪಂಚಾಂಗ [ ತಿಥಿ-ವಾರ-ನಕ್ಷತ್ರ-ಯೋಗ-ಕರಣ ] ಗಳನ್ನೂ, ಅವುಗಳ ಘಳಿಗೆ ಘಳಗಳನ್ನೂ ಗುಣಿಸಲು ಬರುವದು. ಇನ್ನೂ ಅನಂತ ನವೀನವಾಗಿ ಪಂಚಾಂಗ ಗುಣಿಸತಕ್ಕವರಿಗೆ ಅನುಕೂಲ ಸಂಗತಿಗಳೂ ಬಿಡಿಸಿದ ಗಣಿತೋದಾಹರಣೆಗಳಲ್ಲಿ ಅವೆ. ಬೆಲೆ ೩—೦—೦

**ಪಂಡಿತ, ವೇ. ಕೋಟಪ್ಪಯ್ಯ ಶಾಸ್ತ್ರಿಗಳವರು ಹಿರೇಮಠ,**
**ಶ್ರೀ ಜಗದ್ಗುರು ರೇಣುಕ ಶಿವಾನಂದ ರಾಜೇಂದ್ರ ಧರ್ಮ ಗ್ರಂಥ ಪ್ರಕಾಶನ ಕಚೇರಿ. ಗದಗ.**

## ನಮ್ಮಲ್ಲಿ ದೊರೆಯುವ ಅಪೂರ್ವ ಪುಸ್ತಕಗಳು.

| | |
|---|---|
| ಭೂಲೋಕದ ಕಾಮಧೇನು ಎಂಬ ಸಚಿತ್ರ ವಿದ್ಯಾಭಾಂಡಾರ | ೪-೮-೦ |
| ಶಿವಾಚಾರ ನವರತ್ನ ಅಥವಾ ಭಕ್ತಮಾಹೇಶ್ವರರ ಕೈಪಿಡಿ | ೩-೪-೦ |
| ಪ್ರಪಂಚ ದರ್ಪಣ [ ವ್ಯಾಪಾರ ಸಂಜೀವಿನಿ ಸಹಿತ ] | ೨-೧೨-೦ |
| ಗುಪ್ತಪ್ರಶ್ನಸಿದ್ಧಾಂಜನ [ ವಿಖ್ಯಾತ ಪ್ರಶ್ನಗ್ರಂಥ ] | ೨-೦-೦ |
| ದಾಂಪತ್ಯದ ಗುಟ್ಟು ಎಂಬ ಸಚಿತ್ರ ಕಾಮಶಾಸ್ತ್ರ | ೫-೮-೦ |
| ವೈದ್ಯ-ತಂತ್ರ-ಮಂತ್ರಾದಿ ಪಂಚಸಿದ್ಧಿ [ ನೋಡತಕ್ಕ ಪುಸ್ತಕ ] | ೩-೪-೦ |
| ಸಂಸಾರಸುಖಮಾರ್ಗ ಎಂಬ ಸಚಿತ್ರ ಕೋಕಶಾಸ್ತ್ರವು | ೨-೪-೦ |
| ಬ್ರಹ್ಮೋತ್ತರಖಂಡವನ್ನೊಳಗೊಂಡ ಶಿವಲೀಲಾಮೃತ | ೨-೪-೦ |
| ಮಹಾಪರೋಪಕಾರಿ-ಹಾತೀಮತಾಯಿ ಕಥೆ [ ಸಚಿತ್ರ ] | ೨-೪-೦ |
| ಚಿತ್ರ ಹೇಮರಡ್ಡಿ ಮಲ್ಲಮ್ಮ ಮತ್ತು ಅಕ್ಕಮಹಾದೇವಿ ಕಥೆ | ೦-೮-೦ |
| ಕಾ ಸರ್ವಜ್ಞಮೂರ್ತಿಯ ವಚನಗಳು | ೨-೪-೦ |
| ಪದ್ಯ ಸರ್ವಜ್ಞಮೂರ್ತಿಯ ವಚನಗಳು | ೧-೪-೦ |
| ಸಚಿತ್ರ ಹದಿನಾರು ಸೋಮವಾರ ವ್ರತಕಥಾ | ೦-೮-೦ |
| ಚಿತ್ರ ಸತ್ಯಶಂಕರ ವ್ರತಕಥಾ [ವರದ ಶಂಕರವ್ರತ]. | ೧-೮-೦ |
| ಶಿವಭಜನೆ ಮಂಗಳಾರುತಿ ಭಾಗ ೧ | ೦-೮-೦ |
| ಸಂಕ್ಷಿಪ್ತ ಶಿವಪೂಜಾವಿಧಿ (ಸರ್ವ ಮಾನ್ಯವಾದದ್ದು) | ೦-೮-೦ |
| ದಿ ಸೆಲ್ಫ ಇಂಗ್ಲಿಷ ಸ್ಟಡಿ (ಒಂದೇ ತಿಂಗಳಲ್ಲಿ ಇಂಗ್ಲಿಷ ಬರುವದು) | ೦-೮-೦ |
| ತತ್ವಜ್ಞಾನ ಕೀರ್ತನೆಗಳು | ೦-೮-೦ |
| ವಿಚಾರ ಸಪ್ತಕ ( ವಚನರೂಪ ) | ೦-೮-೦ |
| ಶ್ರೀ ಅಖಂಡೇಶ್ವರ ವಚನಾಮೃತ | ೦-೮-೦ |
| ವಚನ ನೀತಿಸಾಮ್ರಾಜ್ಯ (ತಿದ್ದಿ ಬೆಳೆಸಿದ ಅಮೂಲ್ಯಗ್ರಂಥ) | ೦-೮-೦ |
| ಪದ್ಯ-ವಚನ ಶನಿದೇವರ ಮಹಾತ್ಮೆ (ಭಾಮಿನಿ ಷಟ್ಪದಿ ಸಚಿತ್ರ) | ೦-೮-೦ |
| ಸಚಿತ್ರ ವಚನ ಶನಿದೇವರ ಮಹಾತ್ಮೆ | ೦-೬-೦ |
| ಶ್ರೀ ಬಸವಣ್ಣನವರ ಲೀಲಾ ಪದ್ಯಾವಲಿ (ತಿದ್ದಿ ಸುಧಾರಿಸಿದ್ದು) | ೦-೮-೦ |
| ವೀರಶೈವ ಸಚಿತ್ರ ಜೋಗುಳಪದ ಮಾಲೆ | ೦-೮.೦ |
| ಕನ್ನಡ-ಹಿಂದೀ ಸ್ವಯಂಬೋಧೆ (ವ್ಯಾಕರಣ ನಿಯಮ ಸಹಿತ) | ೦-೮-೦ |
| ಕನ್ನಡ-ಮರಾಠಿ ಸ್ವಯಂಬೋಧೆ " " | ೦-೮-೦ |
| ಶ್ರೀ ಬಸವೇಶ್ವರ ವಚನಸುಧಾ ಭಾಗ ೧ | ೦-೮-೦ |
| ಹೆಂಗಳೆಯರ ಮಂಗಳ ಹಾಡು | ೦-೮-೦ |

ಪಂಡಿತ, ವೇ. ತೋಟಪ್ಪಯ್ಯ ಶಾಸ್ತ್ರಿಗಳವರು ಹಿರೇಮಠ, ಗದಗ